**ಚಿಮಟಗೆ** ' ಚಿಮ್ಮಟಗೆ ' ನೋ.
**ಚಿಮಟು** ' ಚಿವುಂಟು ' ನೋ.
**ಚಿಮಟೆ** ' ಚಿಮ್ಮುಟ ' ನೋ.
**ಚಿಮಣಿ** (ನಾ). ೧. ಹೊಗೆ ಹೋಗುವ ನಳಿಕೆ ; ಹೊಗೆಗೂಡು : ಅದುವೆ ಫ್ಯಾಕ್ಟರಿ ಚಿಮಣಿಗಳೆರಡು ಹೊಗೆಯನ್ನು ಉಗುಳುವ ಕೊಳವೆಯ ಜೋಡು (ಕಪಪು. ೪-೧೧೪); ಕಾರ್ಖಾನೆಯ ಚಿಮಣಿಗಳಂತೆ ಕಂಡಿರಬೇಕು(ಕುದಕ. ೩) ; ಸುಟ್ಟು ಕಪ್ಪಾಗಿ ಕಾಣುವ ಚಿಮಣಿಗಳು (ಯೋಧಪು. ೧). ೨. **ದೀಪದ** ಬುರಂಡೆ ; ದೀಪಕ್ಕೆ ಹಾಕುವ ಗಾಜಿನ ಬುರುಡೆ ; ದೀಪದ **ಪಾವು** (ಉಕ) : ದೀಪಕದ (Burner) ಮೇಲೆ ಚಿಮಣಿಯನ್ನು ಹಾಕುವುದೂ ಇದೇ ಉದ್ದೇಶದಿಂದ (ಭೌತವಿ. ೨೯೪). ೩. ಸೀಮೆಯೆಣ್ಣೆಯ ಬುಡ್ಡಿ : ಗೋಡೆಯೊಂದಕ್ಕೆ ನೇತಾಡುತ್ತಿದ್ದ ಚಿಮಣಿಯ ದೀಪದ ಮಂದಪ್ರಕಾಶದಲ್ಲಿ ಅಲ್ಲಿನ ದೃಶ್ಯ ನಿಧಾನವಾಗಿ ಆತನ ಕಣ್ಣುಗಳೆದುರಿಗೆ ಮೂಡಿತು(ಜ್ಞಾಲಾಮು. ೦೩೯); ಸೀಮೆಎಣ್ಣೆಯ ಚಿಮಣಿಯ ಬುಡ್ಡಿ ಉರಿಯುತ್ತಿತ್ತು (ರಂಗರೋ. ೦೦೪); ಉರಿಯುವ ಚಿಮಣಿಯನ್ನು ಆರಿಸಲು ಅವಳಿಗೆ ನೆನಪಾಗಿರಲಿಲ್ಲ (ಚಂದ್ರಶಾ. ೧). [ ←ಇಂ. Chimney ]
**ಚಿಮಣಿಎಣ್ಣೆ** (ನಾ). ಕಲ್ಲೆಣ್ಣೆ ; ಸೀಮೆಎಣ್ಣೆ : ಏಕೆ ಮನೆಯಲ್ಲಿ ಚಿಮಣಿ ಎಣ್ಣೆ ಇದ್ದಿಲ್ಲವೇನು ? (ಕುರಿಹಿಂ. ೭೩) ; ಚಿಮಣಿಎಣ್ಣೆಯ ದೀಪಗಳು ಕಾಣಿಸಿಕೊಂಡುವು (ಮೂರುದಾ. ೧೦೨). P ಈ ಶಬ್ದ ಸೀಮೆಎಣ್ಣೆ ಎಂಬುದರಿಂದಲೂ ಬಂದಿರಬಹುದು. [ ಚಿಮಣಿ + ಎಣ್ಣೆ ]
**ಚಿಮರು** (ನಾ). ಕುಣಿಕೆ; ಜೀರುಗುಣಿಕೆ: ಒಂದು ಹಗ್ಗವನ್ನು ದೋಣಿಯ ಮುಂದಿನ ಶಿಖರಕ್ಕೆ ಚಿಮರುಹಾಕಿ ಕಟ್ಟಿ (ಚಂಗಾಳ್ಯ. ೫೦೨). [ ? ]
**ಚಿಮಿಚಿಮಿ** (ನಾ). ಒಂದು ಅನುಕರಣ ಶಬ್ದ ; ಹಸಿಪದಾರ್ಥಗಳಂ ಸುಡಂವಾಗ ಉಂಟಾಗುವ ಶಬ್ದ : ಮೃಗಶಿಶುಗಳ್ ಕರಿಮುರಿ ಕಣ್ಗೊಗೆದ ಮರಂ ಘರಿಘರಿಲ್ ಗಜಂ ಚಿಮಿಚಿಮಿಯೆಂದು . . . ಸೀದುವು (೧ಶಿಕ. ೯-೨೨) : ಆ ದೆಸೆ ಚಿಮಿಚಿಮಿಯೆನುತುರಿದುದು ಗಗನ ಜಾಱಿದುದು (ಪರ್ಣಪ. ೭-೨೯). ' ಸಿಮಿಸಿಮಿ ' ಪರಾ.
**ಚಿಮಿಚಿಮಿಸು**(ಕ್ರಿ). ಚಿಮಿಚಿಮಿ ಎಂದಂ ಶಬ್ದಮಾಡಂ: " ಚಿಮಿಚಿಮಿಸು- ಶಬ್ದೇ, ಲುಠನೇ ಚ (ಹೊರಳಾಡು) " (ಶಮುಧಾ) ; ಚಿಮಿಚಿಮಿಸೆ ಕಾಳಿಸುವುದುಂ ಇಕ್ಷುಯಂತ್ರಂಗಳಿಂ ಓಟ್ವುದುಂ ಬ್ರಸಿದ ದಸಿಯೊಳ್ ತಗೆವುದುಂ . . . ಮೊದಲಾದ ಪಲವುಂ ತೆಱದ ದಾರುಣೋದಗ್ರನಿಗ್ರಹ ವಿಗ್ರಹಕ್ಕೆ ತಮ್ಮ ವಿಗ್ರಹಂಗಳನೊಡ್ಡಿ (ಶುಕುಮಾ. ೧೧-೪೭ ವ) ; ಚಿಮಿಚಿಮಿಸಿ ಕಾಯ್ದು ಧೂಪಂ ಸವಿಯ ಹೊಗೆಯನುಗುಳೆ (ಒಹಿರ. ಹ. ೨೦೯-೫) ; ದಿಗ್ದಾವಾನಲಂ ಪರ್ವೆ ಚಿಮಿಚಿಮಿಸಿ ಸುಡುತಿರ್ದುದಖಿಳ ಜೀವಾದಿಗಳನು (ವೀಕ್ತಿಕು. ೩-೧೯-೦೦) : ಪರಿವರುಣಜಲಧಿನುಣ್ಬುದು ಕರುಳಿಂ ಚಿಮಿಚಿಮಿಸುತಿರ್ಪ ಕೋಟ್ಕಿದ್ದುಟಿಂ ಸಂಗರರಂಗಮಾವಗಂ ಕೊಕ್ಕರತೆಯನೊಡರಿಸದದಾರ ಕಣ್ಗಂ ಮನಕಂ (ರಸರ. ೭-೧೧೭). 'ಸಿಮಿಸಿಮಿಸು' ಪರಾ. [ ಚಿಮಿಚಿಮಿ + – ಇಸು₃ ]
**ಚಿಮುಕಿಸು**, ಚುಮುಕಿಸು (ಕ್ರಿ). (ದ್ರವವನ್ನು) ಎರಚು ; ಸಿಂಪಡಿಸು ; ತಳಿ ; ಸಿಂಪಿಸು : ಸಿಮೆಂಟ್, ಸುಣ್ಣದ ತಿಳಿ . . . ಇವನ್ನು ಅದುಮಿದ ಗಾಳಿಯಿಂದ ತುಂತುರು ತುಂತುರಾಗಿ ಚಿಮುಕಿಸುತ್ತಾರೆ (ಶಿಲ್ಪನಾ. ೨೦೦); ಅದರಲ್ಲಿದ್ದ ರಸವನ್ನು ರೋಗಿಯ ತಲೆಯ ಮೇಲೆ ಚಿಮುಕಿಸಿದನು (ಮಣಿಸ. ೧೭) ; ಅವರೆಲ್ಲರೂ ಬಾಳೆಎಲೆಗಳನ್ನು ನೀರು ಚಿಮುಕಿಸಿ ತೊಳೆದುಕೊಂಡರು (ಚಂಗಾಳ್ಯ. ೨೦) ; ನಾವು ಕುಳಿತಲ್ಲಿಂದ ಚಂದ್ರನ ಬೆಳ್ಳಿಎಲೆಗಳ ಮೇಲೆ ರೇಕುಗಳನ್ನು ಚಿಮುಕಿಸಿದಂತೆ ಕಾಣುತ್ತಿತ್ತು (ಅಲಹೂ. ೦೧೨). **ಚುಮುಕಿಸು :** ಹಣೆಯ ಮೇಲೆ ಚುಮುಕಿಸಿದಳು (ದಾಂಕ್. ೪೫).
[ ಚಿಮುಕು + – ಇಸು₃ ]

**ಚಿಮುಕು**, ಚಿಮಂಕು (ಕ್ರಿ). ಸಿಂಪಡಿಸು ; ತಳಿ. ' ಚಿಮುಕಿಸು ' ಪರಾ. **ಚಿಮಕು :** ' ಚಿಮಂಕಲು ' ಪರಾ. [ <ಚಿಮ್ಮು₁ ]
**ಚಿಮುಟ** ' ಚಿಮ್ಮುಟ ' ನೋ.
**ಚಿಮುಟಾಂಗ** (ನಾ). ಇಕ್ಕುಳದ ಆಕಾರವುಳ್ಳ ಸಾಧನ ; ಪಟಕಾರ : ಶಸ್ತ್ರಚಿಕಿತ್ಸೆಯ ಚಿಮುಟ . . . ಚಿಮುಟದಂಥ ಅಂಗ: ಚಿಮುಟಾಂಗ (Forceps. ಇಂಳಿನಿ) ; ಮೂರನೆ ಅಥವಾ ಕೊನೆ ತುಂಡು, ಎರಡನೆ ತುಂಡಿನ ಕೊನೆಯಲ್ಲಿ ಕೀಲುಗೊಂಡು ಒಂದು ಜೊತೆ ಸೂಕ್ಷ್ಮವಾದ ಚಿಮುಟಾಂಗಗಳಾಗಿವೆ (ಕೀಟಬ. ೮೭).
[ ಚಿಮುಟ (<ಚಿಮ್ಮುಟ) + ಅಂಗ₃ ]
**ಚಿಮುಟಗೆ** ' ಚಿಮ್ಮಟಗೆ ' ನೋ.
**ಚಿಮುಟು**, **ಚಿವುಟು₁** (ಕ್ರಿ). (ಕಣ್ಣನ್ನು) ಮಿಟುಕಿಸು, – ಮಿಡಿ : (೬). **ಚಿವುಟು₁ :** ' ಕಣ್ಚಿವುಟು ' ಪರಾ.
[ ದೇ.೩ ತಮಿ. ಚಿಮಿಟ್ಟು, ಚಿಮಿಟ್ ; ಮಲ. ಚಿಮಿಟ್ಟು ]
**ಚಿಮೂಕ** (ನಾ). ಒಂದು ಬಗೆಯ ಪಕ್ಷಿ : ಚಿಮೂಕ ದೊಡ್ಡ ಮರಪಕ್ಕಿ (ಅಶಾನಿ. ೧೦-೩೫). [ ? ]
**ಚಿಮ್ಮಂಡೆ**, **ಜಿಮ್ಮಂಡೆ** (ನಾ). ಜೀರುಂಡೆಹುಳು; ಜೀರುದುಂಬಿ : ವನದ ಚಿಮ್ಮಂಡೆಗಳ ಘೋರಧ್ವನಿಗಳಲಿ ಕಿವಿ ಮೃಗಕುಲದ ಸೊಗಡಿನಲಿ ನಾಸಿಕ (ಕುವ್ಯಾಅ. ೦೩-೨೦). **ಜಿಮ್ಮಂಡೆ :** " ರಿಷಿಲ್ಲಿಕೆಯೆನಲ್ ಜಿಮ್ಮಂಡೆಗಕ್ಕು ನಾಮಂ " (ಸೂಂಗರಾ. ೫೨-೦೦).
[ ದೇ.೩ ತಮಿ. ಮಲ. ಚಿಮಿಲಿ ; ತೆಲು. ಚಿಮಟ, ಚಿಮ್ಮಟ, ಚಿಮ್ಮಟ, ಚಿಮ್ಮುಟ ]
**ಚಿಮ್ಮಚನೂರ್** (ನಾ). ಒಂದು ಊರಿನ ಹೆಸರು : ಕಟಿಯೂರಯ್ಯಂಗಳ ದೇವನುಂ ಚಿಮ್ಮಚನೂರ ಮಂಹಾರಾಜಯ್ಯನುಂ (ಎಕ. XI, ಚಿತ್ರದು. ೭೩-೩೦:, 987). [ ? + ಊರ್ ]
**ಚಿಮ್ಮಟ** ' ಚಿಮ್ಮುಟ ' ನೋ.
**ಚಿಮ್ಮಟಿ** ' ಚಿಮ್ಮುಟ ' ನೋ.
**ಚಿಮ್ಮಟಗೆ**, **ಚಿಮಂಟಗೆ**, **ಚಿಮಂಟಿಗೆ** (ನಾ). ೧.=ಚಿಮ್ಮುಟ ೧: ಚಿಮ್ಮಟಗೆಯಲಿ ಮುಳ್ಳನು ಪೊತ್ತಿ ಅಮರಿಸಿದಂತೆ (ಜ್ಞಾನಸಿಂ. ೦೮-೮೩). **ಚಿಮಟಗೆ:** ೧. ಕರಗಿದ ಬೆಳ್ಳಿಯನ್ನು ಪೊಬ್ಬ ಗಟ್ಟಿಗನಾದ ಮನುಷ್ಯನು ಯೆರಡು ಚಿಮಟಗೆಗಳಿಂದ ಹಿಡಿದು ಯೆತ್ತಿ, ಮಣ್ಣಿನ ಹಲಿಗೆಗಳಲ್ಲಿ ಮಾಡಿದ ಕಾವಲಿಗಳಲ್ಲಿ ಸುರುವುವನು (ಕಥಾಗ. ೨೮೨) : ಹಡಪಿಗನು ತನ್ನಲ್ಲಿರುವ ಚಿಮಟಗೆಯಿಂದ . . . ಆ ಕಾಳನ್ನು ತೆಗೆದು (ಸುಪರ್ಣ. ೩೮). ೨. **ಹೆಬ್ಬೆರಳು ಮತ್ತು ತೋರಬೆರಳಿನಲ್ಲಿ ಹಿಡಿಯುವಷ್ಟು ಪ್ರಮಾಣ ; ಒಂದು ಚಿಟಿಕೆ :** ಟೊಂಕದಲ್ಲಿಟ್ಟ ಸಕುವಿನ ಡಬ್ಬಿಯನ್ನು ತೆಗೆದು ಒಂದು ಚಿಮಟಗೆ ನಸ್ಯವನ್ನೇರಿಸುತ್ತ (ಪಮೂಅ. ೨೭೩): ಒಂದು ಚಿಮಟಗೆ ಮಣ್ಣನ್ನು ತೆಗೆದುಕೊಂಡು ಬಾಯಲ್ಲಿ ಹಾಕಿಕೊಂಡಳು (ಮಹಿಮಾ. ೧೨೫). **ಚಿಮುಟಗೆ :** ೨. ಚಿಮುಟಗೆಯಷ್ಟು ಇದ್ದಲಿಯ ಪುಡಿಯನ್ನು ಗೇಣುದ್ದ ಹಾಳೆಯ ಚೂರಿನ ಮೇಲೆ ಗೆಳೆವಳೆದು (ಮಾಪಾದ. ೦೦೦).
[ ಚಿಮ್ಮಟ (<ಚಿಮ್ಮುಟ) + – ಇಗೆ₀ ]
**ಚಿಮ್ಮಲು** (ನಾ). ಚಿಮ್ಮುವ ಸಾಧನ ; ಪಿಚಕಾರಿ : ಒಕುಳಿಯ ಪೂರೆತ್ತಿ ಚಿಮ್ಮಲೊಳಿಟ್ಟು ಜಗಿದು ಕೊಳದೊಳು (ಜಿನಮು. ೪೮-೪೭). ' ಚಿಮ್ಮುಗೋವಿ' ಪರಾ. [ ಚಿಮ್ಮು₁ + – ಅಲು (< – ಅಲ್₂) ]
**ಚಿಮ್ಮಿ₁** (ನಾ). ಒಂದು ಬಗೆಯ ಪಳಿದ್ಯ : ಸಕಲ ಸಂಭಾರಂಗಳ ಅಮ್ಮಿಕಲ್ಲೊಳಗರೆದು ನುಣುಗುವಂದದಿ ಕಾಸಿ ಕಮ್ಮನೆಯ ತುಪ್ಪದೊಳು ಪೊಡ್ಡಣಿಗೆಯಂ ಕೊಟ್ಟು ಚಿಮ್ಮಿಯೆಂದೆಂಬ ಹೆಸರಂ ಕೊಟ್ಟು ನವ ಪರಿಮಲವನು ಭಾವನೆಗೊಡುವುದು (ಸೂಪಶಾ. ೨-೪೮). [ ? ]

**ಚಿಮ್ಮು₃** (ನಾ). ಚಿವರ್ಗ (?): ಚರಣದೊಳಿಸೆವ ಚಿಮ್ಮುಯ ಕೆಂಪು ಬಿಗಿದುಟ್ಟ ಮರಕತವಟ್ಟಿ ಮಾಂದಳಿರು ಸಿರದಲಿ ಮೆಱೆಯೆ (ಪ್ರೋಹತ. ೧೯-೩೨).

[ ? ]

**ಚಿಮ್ಮಿಸು** (ಕ್ರಿ). ೧. ಬೆರಳಿನಿಂದ ಮಿಡಿ,–ಮಿಟಿಕು. ೨. **ಹಾರಿಸು; ನೆಗೆಯಿಸು:** ವಾನರರಿಗೋಸುಗ ಗಿರಿಯನೆತ್ತಿ ಚಿಮ್ಮಿಸಿ ನೆಲಕೆ ನಿಲಿಸಿದೆ ನೀ ಅಸಮ ಹನುಮಂತ (ಪುರಂದ. ೩-೬೫-೩). ೩. **ಹೊರ ಹೊಮ್ಮಿಸು; ಸ್ರವಿಸು:** ಪುಸಿದಟುಕಿರ್ವ ಬಾಲಕನ ಪಾದಪುನಾಲಿಸಿ ಗೇಹಕೃತ್ಯಮಂ ಬಿಸುಟತಿವೇಗದಿಂ ಪರಿದು ಸೋಗಿಲೊಳದ್ದಮಿಟ್ಟು ಚಿಮ್ಮಿಸಿ ಮೊಲೆವಾಲ್ಗಳಂ . . . ಸಾರ್ಚಿ ಮೊಲೆಯೂಡುವ ಸ್ನೇಹಗೆಂದು ಸಾರ್ವುದೊ (ಸೂಕ್ತಿಸು. ೬-೩). ೪. **ಚಿಮುಕಿಸು; ಸಿಂಪಡಿಸು:** ಪನ್ನೀರ ವ್ಯೆಗೆ ಚಿಮ್ಮಿಸಿಯಾಲವಟ್ಟಪಿಕ್ಕುವಳು (ಭರತ. ೧೦-೪೬). ೫. **ಝಳಪಿಸು:** ಸುರಗಿಕಾಱಿಂ ಸುರಗಿಯಂ ಚಿಮ್ಮುವಂತೆ ನಾಲಗೆಯಂ ಚಿಮ್ಮಿಸುತ್ತಲ್ (ಪುಣ್ಯಸ್ರ. ೯-೨೫ ವ) ; ಜಯಘೋಷದಿಂ ರಾಜತೇಜಿಯನಡರಿ ಖಂಡೆಯುವ ಚಿಮ್ಮಿಸುತ ಕಡುತವಕದಲಿ ಕಂಠೀರವರಾಜೇಂದ್ರ ನಡೆದನು (ಕಂಸವಿ. ೧೫-೦೫). ೬. **ಬೀಸು:** ಇಕ್ಕೆಲದ ಕೋಕನದವೇತ್ರಿಯರ್ಚಿಮ್ಮಿಸುವ ಚಾರುಚಂಚಲಚಾಮರಂಗಳಿಂದೆ (ಕೃಮಿಥಾ. ೩೦-೯೯).

[ ಚಿಮ್ಮು₁ + – ಇಸು₂ ]

**ಚಿಮ್ಮು₁** (ಕ್ರಿ). ೧. ಬೆರಳಿನಿಂದ ಮಿಡಿ,–ಮಿಟಿಕು : "ಚಿಮ್ಮು–ಅಂಗುಲಿ ವಿಮೋಚನೇ ಶಸ್ತ್ರಕ್ರಿಯಾಯಾಂ ಚ (ಝಳಪಿಸು)" (ಶಮಧಾ). ೨. **ನೂಕು; ತಳ್ಳು:** ರಣದೊಳ್ ಶಕ್ರನ ತೇರನೇಱಿದ ಮಹಾಶೈಲಾಳಿ ಬೆಂಬೀಳ್ವ ಮಾರ್ಗಣದಿಂ ಚಿಮ್ಮಿದ (ಹರಿಶ್ಚಂ. ೮೧) ; ತೋಳುಗಳ ಹಿಡಿದೆಳೆದು ಖಳ ಕರವಾಳದಲಿ ಚಿಮ್ಮಿದನು (ಕೂರರಾ. ೬-೦೦-೫೮). ೩. **ಎಸೆ; ಚೆಲ್ಲು; ತೂರು:** ಕಡಿದು ಚಿಮ್ಮಿದ ಬೆರಳುಗಳ . . . ಕೊಡೆಪುರಳಿದಾಲಿಗಳ ತೋಳಿನ ಕಡಿಕುಗಳ ರಣಮುಹಿ ಭಯಾನಕರಸಕೆ ಗುರಿಯಾಯ್ತು (ಭುವ್ಯಾಭೀ. ೮-೦೮) ; ಕಂಡನಾ ಗಜದ ಮಸ್ತಕ ಸಹ ಕಡೆದಿರ್ದ ಮುಂಡದ ತಲೆ ಗಗನದಲಿ ಚಂಡಪ್ರತಾಪಿಯ ಜಯವಧು ತಿಱಿಕಲ್ಲ ಕೊಂಡಾಡುವಂತೆ ಚಿಮ್ಮಿದನು (ಮೋಹತ. ೩೪-೯). ೪. **ನೆಗೆ; ಹಾರು; ಪುಟಿ:** ತರೆಮೊಯ್ಗಳಿಂ ಚಿಮ್ಮುವಂಬುಕಣಜಾಲದಿಂ (ಉದ್ಭಟ. ೩-೮೩) ; ಘಾತ್ಯಕಿ ನಕುಲರೆಡುವಂಕದಲಿ ಚೂಣಿಗೆ ಚಿಮ್ಮಿದರು (ಕುವ್ಯಾಕ. ೩-೨) ; ಹಯವಡಿಗಡಿಗೆ ಚಿಮ್ಮಿತು ವಾಯುವೇಗದೊಳು (ಸೌಂದ. ೭-೫) ; ನೆತ್ತರಾಗಸಕೆ ಚಿಮ್ಮಿತ್ತು ರಣದೊಳೋಕುಳಿಯ ಮಿತ್ತುವಿನ ಜೀಕೊರ್ಳವಿಯುಂಗುಳ್ವ ಕೆನ್ನೀರೆಂಬೊಲು (ಕೃಮಿಥಾ. ೧೫-೦೩). ೫. **ಹೊರಹೊಮ್ಮು; ಹೊರಸೂಸು:** ಅವನ ಕಣ್ಣುಗಳಲ್ಲಿ ನೀರು ಚಿಮ್ಮಲಾರಂಭಿಸಿತು (ಮುಹಾಗ. ೦೯೯). ೬. **ಎರಚು; ಚಿಮುಕಿಸು; ತಳಿ:** ನರಪತಿ ಕೊಂಡು ಪೀಕರ್ಪಟಪೆಯಂ ದಿಂಡೊಯ್ಯನೆ ಕೊರ್ವೆಯಿಂ ಮನೋಹರಿಯರ ಮೇಲೆ ಚಿಮ್ಮೆ (ಧರ್ಮಾಮ್ಯ. ೬೪-೧೫) ; ಪಡಿಪುಳದೊಡವುತ ಪನ್ನೀರ ಚಿಮ್ಮುತ . . . ಸೌಂದರಿಯರಿದ್ದರು ಬಳಸಿನೊಳು (ಭರತ. ೪-೧೧೮). ೭. **ರಭಸವಾಗಿ ತೂಗು; ಝಳಪಿಸು:** "ಚಿಮ್ಮು–ಅಂಗುಲಿ ವಿಮೋಚನೇ, ಶಸ್ತ್ರಕ್ರಿಯಾಯಾಂ ಚ (ಝಳಪಿಸು)" (ಶಮಧಾ) ; ಕಠಾರಿಗಳನುದ್ದಕ್ಕೆ ಚಿಮ್ಮುತ್ತೊಡನೆ ತಿರುಹುತ್ತ (ಜಿಸಾಪ್ರ. ೬೦-೩೨) ; ಝಾಡಿದು ಚಿಮ್ಮುವ ಖಂಡೆಯವ ಕೈದುಡುಕಿ (ಕೂರರಾ. ೫-೩-೬೦) ; ಕಡಿದು ಮುಂಗೈಯ ಕೋಪಾಟೋಪದಲಿ ಖಳ ಜಡಿದು ಖಂಡೆಯವ ಚಿಮ್ಮಿದನು (ಕಂಸವಿ. ೦೩-೭೫). ೮. **ಬೀಸು:** ಚಿಮ್ಮುವ ಚಾಮರದ ಸೂಸುವ ಸೀಗುರಿಯ (ಗಿರಿಕ. ೩-೫೫ ವ) ; ಚಿಮ್ಮುವ ಚಾಮರಂಗಳನೆಡೆವಿಡದೆ ಪಸರಿಸಿದ ಸೀಗುರಿಗಳೆಡೆಯೊಳ್ (ಉದ್ಭಟ. ೮-೫೨ ವ) ; ಶಶಿಮುಖಿಯರೆಡಬಲದಿ ಕೈವಾರಿಸುತ ಸಿತಚಾಮರವ ಚಿಮ್ಮಲು (ನಳಚ. ೪-೨೫).

[ ದೇ.॥ ತೆಲು. ಚಿಮ್ಮು ]

**ಚಿಮ್ಮು₂** (ನಾ). ನೆಗೆತ: ಚಿಮ್ಮುಗಳ ಕಾಣಿಸುವುದು ಸ್ಫುರಿತವೆನಿಸಿಕೊಂಬುದು ಹಾವು ನಡೆದಂತೆ ಡೊಂಕುಡೊಂಕಾಗಿ ಓಡಿಸುವುದು ನಾಗೋಪ್ಪವೆನಿಸಿಕೊಂಬುದು (ಅಶ್ವಟೀ. ೨೫-೬). [ <ಚಿಮ್ಮು₁ ]

**ಚಿಮ್ಮುಗಾಲ** (ನಾ). (ಆಲಂ) ಉತ್ಸಾಹದ ಕಾಲ: ಏಳು, ಎಚ್ಚರವಾಗು, ಉಸಿರು ತುಂಬು–ಈ ಚಿಮ್ಮುಗಾಲದಲ್ಲಿಯೂ ನೀನೇಳದೇ ಹೋದರೆ ಎಂದೆಂದಿಗೂ ಬೀಳು, ಬಿದ್ದಿರು, ಓ ಕನ್ನಡ ಮಗುವೇ ! (ಕನ್ನನು. I, ೩೬).

[ ಚಿಮ್ಮು₂ + ಕಾಲ ]

**ಚಿಮ್ಮುಗೆ** (ನಾ). ೧. ಚಿಮ್ಮುವಿಕೆ; ಬುಗ್ಗೆ: ಮುಂದಕ್ಕೆ ಅಥವಾ ಮೇಲಕ್ಕೆ ಚಿಮ್ಮಿ ಸೂಸುವ ನೀರು, ಆವಿ, ಅನಿಲ, ಮೊ.ಗಳ ಧಾರೆ: ಬುಗ್ಗೆ ; ಚಿಮ್ಮುಗೆ(Jet. ಇಂಕನಿ). ೨. ಸ್ಫುರಣ: ಮನವ ದೇಹವನಲೆವ ಚಿಮ್ಮುಗೆಗಳೊಂದಾಗಿ ಘನಸಹಜದುಂಗನೆಯ ಕೆರಳಿಸಿದುವು (ಇಂಗೀತ. ೪೬-೨೧).

[ ಚಿಮ್ಮು₁ + – ಗೆ ]

**ಚಿಮ್ಮುಗೊಳ್ಳು** (ಕ್ರಿ). ನೆಗೆ ; ಹಾರು : ದಿವ್ಮಿಡುವ ಘಣಘಣಾಯೆಂಬ ಘಂಟೆಯ ರವಕೆ ಚಿ[ಪಾಠಾಂ. ಚಿ]ಮ್ಮುಗೊಳ್ಳುತ್ತಿರುವ ಆ ಹರಿಣದಂತೆ (ಕನಕ. ೮೪-೪). [ ಚಿಮ್ಮು₂ + ಕೊಳು₁ (<ಕೊಳ್₁) ]

**ಚಿಮ್ಮುಗೋವಿ** (ನಾ). ಪಿಚಕಾರಿ ; ಜೀಕೊರ್ಳವೆ : ಬಗೆಬಗೆಯ ಚಿತ್ರದ ಚಿಮ್ಮುಗೋವಿಯ ತುಂಬಿದೋಕುಳಿಯ (ಅನಂರಾ. ೭-೧-೫೬).

[ ಚಿಮ್ಮು₁ + ಕೋವಿ₁ ]

**ಚಿಮ್ಮುಟ**, ಚಿಮಟ, ಚಿಮಟಿ, ಚಿಮಟೆ, ಚಿಮಂಟ, ಚಿಮ್ಮಟ, ಚಿಮ್ಮಟಿ (ನಾ). ೧. ಚಿವುಟಿ ಹಿಡಿಯುವ ಇಕ್ಕುಳದಂತಹ ಸಣ್ಣ ಸಾಧನ ; ಪಟಕಾರ: ಹಿಡಿಯಿಲ್ಲದ ಶಸ್ತ್ರ ಕೀಲಿಲ್ಲದ ಕತ್ತರಿ ಉಭಯವನೊಡಗೂಡದ ಚಿಮ್ಮುಟ (ಸರ್ವವ. ೧೨೫–೩೪೧) ; ಕತ್ತಿಯ ಬಸವಣ್ಣ ಕೊಟ್ಟ ಕತ್ತರಿಯ ಚೆನ್ನಬಸವಣ್ಣ ಕೊಟ್ಟ ಕಿತ್ತುಹಾಕುವ ಚಿಮ್ಮುಟವ ಪ್ರಭುರಾಯ ಕೊಟ್ಟ (ಪದಗೋ. ೧೩೬-೭೨) ; ದಾನವಿಲ್ಲದರ ಕಡಿದಿಟ್ಟು ಚಿಮ್ಮುಟ ಮೊನೆಯೊಳವರ ಖಂಡವನುಗಿದು (ವೀಕ್ಸಪು. ೪-೧೯-೪೬). **ಚಿಮಟ:** ೧. ನಿನ್ನೆ ದಿನ ಕಾದ ಚಿಮಟಗಳಿಂದ ಅವನ ಹಲ್ಲುಗಳನ್ನೆಲ್ಲ ಕೀಳುವುದರಲ್ಲೇ ಇಡೀ ದಿನವೆಲ್ಲಾ ಕಳೆದೆ (ನಗಹೊ. ೨೨೩). ೨. ಹೆಬ್ಬೆರಳಂ ಮತ್ತು ತೋರಬೆರಳಿನಲ್ಲಿ ಹಿಡಿಯುವಷ್ಟು ಪ್ರಮಾಣ ; ಒಂದಂ ಚಿಟಿಕೆ : ಅವನನ್ನು ಅಲ್ಲಿಂದ ಎತ್ತಿ ಹೊರಗೆ ತರೋದು ಅಂದ್ರೆ ಅವರಪ್ಪ ಶಾಮಣ್ಣನವರಿಂದ ಒಂದು ಚಿಮಟ ನಸ್ಯ ತರುವಷ್ಟು ಕಷ್ಟವಾಯಿತು (ತುಂಬಿಕೊ. ೮೩). **ಚಿಮಟಿ:** ೧. ಇಕ್ಕುಳ ಇಲ್ಲವೆ ಚಿಮಟ (Pincers)ಗಳು ಇಂಥ ಸನ್ನೆಕೋಲುಗಳು (ಬಾಲಶ್ರ. I, ೩೩೮). **ಚಿಮಟೆ:** ೨. ನಿಂಗಿಯು . . . ಜರದಾ ತಂಬಾಕಿನ ಚಿಮಟೆಯನ್ನು ಬಾಯಲ್ಲಿಟ್ಟುಕೊಂಡಳು (ರಕ್ತಧ್ವ. ೨೨೫). **ಚಿಮುಟ :** ೧. ಒಂದು ದಬ್ಬಳ, ಒಂದು ಚಿಮುಟ . . . ಇತ್ಯಾದಿ ಸಲಕರಣೆಗಳು ಬೇಕು (ಮುದ್ರಕ. ೨೦) ; ಕತ್ತರಿ, ಚಿಮುಟ – ಇವು ಸನ್ನೆಗಳು (ಶಿಲ್ಪನಾ. ೦೯೫). **ಚಿಮ್ಮಟ :** ೧. ಅಮ್ಮಮ್ಮ ಕ್ರೂರದಿ ಕೊಯ್ದು ಬಿಸುಡುತ್ತಲ್ಲಿ ಚಿಮ್ಮಟಗಳಿಂ ತಿಱಿದು ತಿಱಿದು ಚಿಮ್ಮುತ್ತಲ್ಲಿ (ಕೊಮ್ಮಕ. ೧೭೬-೧೮). **ಚಿಮ್ಮಟೆ:** ೧. ನೆಱೆ ಕಾದ ಚಿಮ್ಮಟಗಳಲಿ ಖಂಡವ ತೆಗೆವರು (ನಿಜಗ. ೫-೧೧-೨೭).

[ ←ಹಿಂ. ಚಿಮಟಾ, ಚಿಮಟೀ ; ಮರಾ. ಚಿಮಟ್, ಚಿಮಟಾ, ಚಿಮೂಟ್. / ತಮಿ. ಚಿಮಿಟ್ಟಾ ; ತುಳು. ಚಿಮಟಿ. ಚಿಮಿಟಿ, ಚಿಮ್ಮಿ ; ತೆಲು. ಚಿಮಟ, ಚಿಮ್ಮಟ ]

**ಚಿಮ್ಮುರಿ** (ನಾ). ೧. ತಲೆಯುಡಿಗೆ ; ರುಮಾಲು : ದೊಡ್ಡಮುದ್ರೆಯ ಕಳ್ಳರು ತುಱುಬು ಚಿಮ್ಮುರಿಗಳ ಕಟ್ಟಿ ಹಗರಣದ ನಿಱಿಗುರುಳ ಬಾಲೆಯರ ಮುಂದೆ . . . ಬೀಗಿ ಬೆಱೆಯುತ್ತಿಪ್ಪರು (ವೋಲಮಾ. ೧೮೮-೭೦೯) ; ತುಱುಬು ಚಿಮ್ಮುರಿ ಚಿಂದಿ ಕಾಸೆಯ ಸೆಱಗು (ಪ್ರಭುಲೀ. ೫-೬); ಕತ್ತರಿಸಿದ ಪನ್ನೆಯೊತ್ತಿದ ಕೊನೆಮೀಸೆ ಸುತ್ತಿದ ಚಿಮ್ಮುರಿ (ಕುರಾಸಾಂ. ೪೦-೯೨) ;

ನೀಳಕುಂತಳದ ವಿಡಾಯ ಚಿಮ್ಮುರಿಯ ಚೆಲ್ವ ತುಱುಂಬಿನ . . . ಮಿಟ ಸಾರ್ವಭೌಮ (ಹಮ್ಮೀರ. ೬-೨೦). ೨. ಬಿಗಿದ ದಟ್ಟಿ ; ವೀರಗಚ್ಚೆ : ಸುತ್ತಿದ ಚಿಮ್ಮುರಿ ತೊಟ್ಟದ್ದ ಚಿಮ್ಮುರಿ ಮತ್ತೆ ಹಿಡಿದ ಕೈಯುಲಗು ಮುತ್ತಿನ ಸಂಜೋಗದ ಕಂಘುರೆಯಸೇಜೆಯುತ್ತಮರಾವುತರೆಯ್ದು (ಜೀವಂಸಾಂ. ೫-೩೮) : ಮುರಿದುಟ್ಟ ಕಾಸೆ ಚಿಮ್ಮುರಿ ಬಿಟ್ಟ ಜಡೆ (ಭರತ. ೬೩-೦೪). ೩. ಕೈಗಳನ್ನು ಬೆನ್ನ ಹಿಂದೆ ಸೇರಿಸಿ ಬಿಗಿದು ಕಟ್ಟುವುದು ; ಹೆಡಮುರಿಗೆ ; ಹಿಂಗಟ್ಟು : ಸಾಧುಗಳನಾದರಿಸುವೆನು ಮಾಜಾಂತರನು ಚಿಮ್ಮುರಿಯ ಬಿಗಿಸುವೆನವುರಿಯುರ ಕಡೆಗಣ್ಣ ಕಣ್ಣಯಲಿ (ಕುಮಾ.ರ.೨-೩೦). [ ? + ಮುರಿ₃ ]

**ಚಿರ** (ಗು). ೧. ದೀರ್ಘಕಾಲ ಬಾಳುವ ; ಬಹುಕಾಲದ. 'ಚಿರಕಾಲ' ನೋ. (ನಾ). ೨. ಬಹುಕಾಲವಿರತಕ್ಕುದು; ಶಾಶ್ವತಮಾದುದು : ಚಿರ ಮಲ್ಲಿನ್ನಯ ತೇಜಮುಂ(ಅಜಿಂಪು. ೩-೬೯); ಅರಸೊತ್ತಿಗೆಯ ನಂಬಿ ಬಿರುಸು ಮಾತುಗಳೇಕೆ ಚಿರವೆ ಹೂಡಿಸಿಲು ತಿಳಿಯರಸ ಪರಿಕಿಸಲು (ಕನ್ನಡ. ೨೪೩).
[ ಸಂ. ]

**ಚಿರಋಣಿ** (ನಾ). ಉಪಕಾರವನ್ನು ಸದಾ ಸ್ಮರಿಸಿಕೊಳ್ಳುತ್ತಿರುವವನು ; ಕೃತಜ್ಞ : ನಾನು ಅವರಿಗೆ ಚಿರಋಣಿ (ಜೀವಾಕ್ಕ. XI. ಸಂಕಲ್ಪ) ; ಮಾನು ತಮ್ಮ ಉಪಕಾರಕ್ಕೆ ಚಿರಋಣಿಯಾಗಿರುತ್ತೇನೆ (ರಾಯಳ. ೩೫) ; ಅವುಗಳ ಅಪಾರವಾದ ಮಹತ್ವವನ್ನು ತೋರಿಸಿಕೊಟ್ಟದ್ದಕ್ಕೆ ಭಾರತೀಯರು ಚಿರ ಋಣಿ (ಕನ್ನಡ. ೩೬). [ ಸಂ. ಚಿರಋಣಿನ್ ]

**ಚಿರಂ** (ಅ). ಶಾಶ್ವತವಾಗಿ ; ಯಾವಾಗಲೂ : ಕಿಸಜಿಕ್ಕುಗೆ ಭೃಗುಸುತನುದಯಮಾಗೆ ನಿಲ್ಕುಂ ಚಿರಮುಂ (ಲೋಕೋಪ. ೩-೨೬). [<ಚಿರ]

**ಚಿರಂಜೀವ** (ನಾ). ೧. ಬಹುಕಾಲ ಬಾಳುವವನು,-ಬದುಕುವವನು. ೨. ಹಿರಿಯರು ಚಿಕ್ಕವರನ್ನು ಕರೆಯುವಾಗ ಬಳಸುವ ಶಬ್ದ : ಚಿರಂಜೀವ, ರಾಜಶ್ರೀ . . . ಮೊದಲಾದ ಶಬ್ದಗಳನ್ನೂ . . . ಪತ್ರ ಸ್ವೀಕರಿಸತಕ್ಕವರ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಮುಂಬಯಿ. ೪-೮೪). ೩. ಮಗ ; ಪುತ್ರ: ಇವ ನಿನ್ನ ಚಿರಂಜೀವ ಏನು ? (ಅಶಪಾ. ೦೦). [ ಸಂ. ]

**ಚಿರಂಜೀವಿ** (ನಾ). ೧. ಬಹಳ ಕಾಲ ಬದುಕಿರುವವನು. ೨. = ಚಿರಂಜೀವ ೩: ತಮ್ಮ ಚಿರಂಜೀವಿ ಎಂತಹ ಸುಸಂಸ್ಕೃತ ಯುವಕ(ಮಹಾಗ. ೦೮೩). ೩. ಬಹಳ ಕಾಲ ಬದುಕಿರುವವರೆಂದು ಪುರಾಣಪ್ರಸಿದ್ಧರಾದ ಏಳು ಜನರು; ಅಶ್ವತ್ಥಾಮ, ಬಲಿ, ವ್ಯಾಸ, ಪರಶುರಾಮ, ವಿಭೀಷಣ, ಕೃಪಾಚಾರ್ಯ ಮತ್ತು ಆಂಜನೇಯ. ಕೆಲವರು 'ಮಾರ್ಕಂಡೇಯ'ನನ್ನೂ ಇವರ ಜೊತೆ ಸೇರಿಸುತ್ತಾರೆ. ೪. ಕಾಗೆ: ದೊರೆಯೇ ಮಲ್ಲಿಗೆಗಕ್ಕೆ ಹಂಸೆಗೆ ಬಕಂ . . . ಬಕನಿಕಾಯ[ಕ್ಕೆ] ಚಿರಂಜೀವಿಗಳ್ (ಕಜ. IV, ೦-೮೯; 1264). [ ಸಂ. ಚಿರಂಜೀವಿತ್ ]

**ಚಿರಂಟಿ**(ನಾ). ೧. ತಂದೆಯ ಮನೆಯಲ್ಲಿಯೇ ಇರುವ ಪ್ರಾಪ್ತವಯಸ್ಕಳಾದ ಹೆಂಗಸು. ೨. ಯುವತಿ: ಪಾಡೆ ಚಿರಂಟಿಯರ್ (ಉದ್ಯ. ೬-೬೦).
[ ಸಂ. ಚಿರಂಟೀ ]

**ರಂಟಿಕೆ** (ನಾ). = ಚಿರಂಟಿ ೧ : "ಚಿರಂಟಿಕೆ ಸುವಾಸಿನಿಯಪ್ಪವಳುಂ ವಯಸ್ಥೆಯುಂ" (ಪಟ್ಟಕೋ. ೦೨೮-೬೫). [ ಸಂ. ಚಿರಂಟಿಕಾ ]

**ಚಿರಂತನ** (ಗುಂ). ೧. ಪೂರ್ವದ ; ಹಿಂದಿನ ಕಾಲದ ; ಪ್ರಾಚೀನವಾದ : ಚಿರಂತನಭವದ ಕಿಲ್ಬಿಷ ಕರ್ಮಪಾಕಪ್ರವರ ದುರಿಯೋಧನನ ಸದ್ಮಪಡೆಶ ಮಾತ್ರದಲಿ ಎವಗೆ ರಚಿಸಿತು ರಾಜ್ಯವಿಧ್ವಂಶವನು (ಕುಮಾಗ. ೦೦-೪೪). ೨. ಸ್ಥಿರವಾದ ; ಶಾಶ್ವತವಾದ : ಆತ್ಮಜ್ಞಾನ, ಜಗದ ಅನುಭವ, ಅನುಭಾವಗಳೇ ಅಕ್ಕನ ಸಾಹಿತ್ಯಕ್ಕೆ ಚಿರಂತನ ವಸ್ತು ! (ಕನ್ನಡಳ. ೬೬). (ನಾ). ೩. ನಿರಂತರ ; ಸತತ : ಚಿರಂತನವೂ ಮೂತನವೇರುತ್ತಿರುವ ಜೀವನದ ಸ್ವರೂಪ ಎಂಥದು ? (ಶಿಕ್ಷದ. ೦). ೪. ವಯಸ್ಸಾದವನು : ಹಿರಿಯ : ಅವಱೊಳಗೆ ಚಿರಂತನನುಂ ಬುದ್ಧಿವಂತನುಮಪ್ಪುದೊಂದು ಕಪೋತಂ ಪಕ್ಷಿಗಣಕ್ಕಿಂತೆಂದುದು (ಪಂಚತಂ. ೨೮೮-೦೯). [ ಸಂ. ]

**ಚಿರಂತಹಿಂಸೆ** (ನಾ). ಒಂದು ಬಗೆಯ ನರಕ : ಯಮಾನುಗನಿಯಮಿತ . . . ಚಿರಂತಹಿಂಸೆಗಳೆಂಬೈದು ಮಂತ್ರಿನರಕಂಗಳಿಂ ಭಯಂಕರಮಾಗಿ ಯಮಮಾಯೆಯುಂಬರಸುವರಕವಿಹುದು (ವಿವೇಕ. ೦೫೦). [ ? + ಹಿಂಸೆ ]

**ಚಿರಂತನಾಚಾರ್ಯ** (ನಾ). ಹಿಂದಿನ ಕಾಲದ ಆಚಾರ್ಯ,-ವಿದ್ವಾಂಸ: ಮಿಗೆ ಕನ್ನಡಗಬ್ಬಂಗಳೊಳಗಣತುಗುಣಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸು ವರ್ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ (ಕವಿರಾ. ೦-೨೬).
[ ಚಿರಂತನ + ಆಚಾರ್ಯ ]

**ಚಿರಕಾಲ** (ನಾ). ಬಹಳ ಕಾಲ; ದೀರ್ಘಕಾಲ: ಚಿರಕಾಲಂ ಬಂಧವದೊಳ್ ಮುರುಳಾದಿರ್ದನ ಮರುಳ್ತನಂ ತಿಳಿದವೊಲೋಸರಿಸಿರೆ ಮಿಥ್ಯಾತ್ವಂ (ಧರ್ಮಪು. ೦೨-೩); ಅಂತು ದೀಕ್ಷೆಯಂ ಕೆಯ್ಕೊಂಡು . . . ಚಿರಕಾಲಮಿರ್ದು (ಪುಷ್ಪಪು. ೯-೯ ವ). [ ಚಿರ + ಕಾಲ ]

**ಚಿರಕಾಲಿಕ** (ನಾ). ಬಹಳ ಕಾಲ ಇರುವುದು: ಜನಸಮುದಾಯವು ಒಂದು ರಾಜಕೀಯೋದ್ದೇಶದಿಂದ ಚಿರಕಾಲಿಕವಾಗಿ ಸ್ಥಾಪಿಸಲ್ಪಟ್ಟಿರಬೇಕು (ರಾಜ್ಯಾಂಗ. ೨೬) ; ಆ ಸತ್ಯ ಚಿರಕಾಲಿಕವಾಗಲಿ ಎಂದು ಶ್ರವಿಸುವ ಮಾತು ಬೇರೆ (ಶಾಕ್ಯಲ. ೨೬೯). [ ಸಂ. ]

**ಚಿರಚ** 'ಚಿರತೆ₁' ನೋ.

**ಚಿರಚು** 'ಚಿರತೆ₁' ನೋ.

**ಚಿರಜೀವಿ**(ನಾ). ೧. ಬಹಳ ಕಾಲ ಬದುಕುವವನು ; ದೀರ್ಘಾಯುಸ್ಸುಳ್ಳವನು : ಪುತ್ರಾನ್ವಿತಂ ಲಂಬಮುಷ್ಕನವಂ (ತಾಂ) ಚಿರಜೀವಿ ತತ್ಸಮತೆಯಿಂದಂ ಧೈರ್ಯವುಂ ತಾಳ್ದುಗುಂ (ಲೋಕೋಪ. ೦೦-೫) ; ಕಡಲ ಕಡೆ, ಸುಧೆಯು ಕುಡಿ; ಹರಿಹರರ ಮೀರಿ ಚಿರಜೀವಿಯಾಗು! (ಶಾಂತಳ. ೪೪-೩) ೨. ಕಾಗೆ : "ಅರಿಷ್ಟಃ . . . ಚಿರಜೀವೀ, ವಾಯಸಃ-ಈ ೧೦ ಕಾಗೆ" (ಹಲಾಯು. ೪೦-೯೨). [ ಸಂ. ಚಿರಜೀವಿನ್ ]

**ಚಿರಜೀವಿತೆ** (ನಾ). ಬಹಳಕಾಲ ಬದುಕುವಿಕೆ ; ಶಾಶ್ವತವಾಗಿರುವಿಕೆ : ಇನ್ನೇವೆಸಗೊಂಡಪುದಾ ನರರ ಚಿರಜೀವಿತೆಯಂ (ಚಂದ್ರಪ್ರ. ೨-೩೨).
[ಸಂ. ಚಿರಜೀವಿತಾ ]

**ಚಿರಡಿ₁** (ನಾ). ಕಿರಿಗೆ ; ಚಿಕ್ಕಸೀರೆ : ಚಿರಡಿ ಚಂದಿ ಕದ್ದನಂತೆ (ಸಣಗಾ. II, ೮೫೬). [ ←ಮರಾ. ಚಿರಡೀ ]

**ಚಿರಡಿ₂** (ನಾ). ಕೋಪ ; ಸಿಟ್ಟು: ಅವರ್ಗ ಚಿರಡಿಗೆ ಕರಸ್ಥಾನ (ದಾಸಪ. II, ೨೦೬).

**ಚಿರಡಿಗೇಳು**=ಸಿಟ್ಟಿಗೇಳು; ರೇಗು: ಚಿರಡಿಗೆದ್ದು ರಾಗಿನ್ನ ಒಂದೇಟು ಹೊಡೆದ (ಪ್ರವಿ. ೩೫೩) ; ಅವರಿಗೆ ಉಂಟಾದ ಕುಂಠಿತತನವನ್ನು ಕಂಡು ಅವರು ಬಹಳ ಚಿರಡಿಗೇಳುವರು (ಸ್ವಶಿಕ್ಷ. ೪೨೯). [ ←ಮರಾ. ಚಿರಡೀ ]

**ಚಿರಣಿ** 'ಚೀರಣಿ' ನೋ.

**ಚಿರಣಿಗೆಲಸ** 'ಚೀರಣಿಗೆಲಸ' ನೋ.

**ಚಿರತೆ₁**, ಚಿರಚ, ಚಿರಚು, ಚಿರ್ಚ, ಚಿರ್ಚು (ನಾ). ಮೈಮೇಲೆ ಚುಕ್ಕೆಗಳಿರುವ ಹುಲಿಜಾತಿಗೆ ಸೇರಿದ ಒಂದು ಬಗೆಯ ಕ್ರೂರಪ್ರಾಣಿ ; ಚಿಟ್ಟೆಹುಲಿ: ಹುಲಿಜಾತಿ : ಹುಲಿ, ಹೆಬ್ಬುಲಿ . . . ಚಿರತೆ (ಪಮ್ಮನು. ೨೩೯) . ಚಿರಚ: ಹುಲಿ ಜಾತಿ : ಹುಲಿ, ಹೆಬ್ಬುಲಿ . . . ಚಿರತೆ, ಶಿವಂಗಿ, ಚಿರಚ (ಪಮ್ಮನು. ೨೩೯). ಚಿರಚು : ಚಿರಚು ಕಾಮುಕಪ್ರಾಣಿಯೆಂದೂ . . . ಹೇಳಿರುವನು (ಪಕಪ. ೨೯). ಚಿರ್ಚ : (+). ಚಿರ್ಚು : ಅಡವಿಗಳಲ್ಲಿ ಚಿರ್ಚು . . . ಅಡವಿಯ ಬೆಕ್ಕು ಮುಂತಾದವುಗಳಿರುತ್ತವೆ (ಕೊಪಪ. ೩೪)
[ ದೇ.॥ ತಮಿ. ಚಿಱುತ್ತೈ; ಕೊಡ. ಚಿರತೆ; ತೆಲು. ಚಿಱುತ ]

**ಚಿರತೆ₃** (ನಾ). ಶಾಶ್ವತ ಪದವಿ ; ಮೋಕ್ಷ : ನಲವಿಂದ ಚಿರತೆಯು ಬಯಸಿ ಜಿನೇಂದ್ರನ ಚರಣಸೇವೆಯನಂ ಮಾಳ್ಪೆನೆಂದು (ಜಂಬೂಸ್ವಾಮಿ. ೨೪-೧೨೬). [ ಸಂ. ಚಿರತಾ ]

**ಚಿರನವತೆ** (ನಾ). ಸದಾ ಹೊಸದಾಗಿರುವಿಕೆ: ಒಂದು ಕೊಂಬೆಯು ಬಾಡಲಿ ನ್ನೊಂದು ಚಿಗುರುವುದು ಸಂದಿಹುದು ಚಿರನವತೆಯುತ್ಸವ ಪುರಕೆ (ಮುಂಕುಳ. ೨೫೨). [ ಚಿರ + ನವತೆ ]

**ಚಿರನಿದ್ರೆ** (ನಾ). (ಅಲಂ) ಸಾವು: ಆ ರೋಗಿಯನ್ನು ಚಿರನಿದ್ರೆ ಆವರಿಸಿತು (ರೂಢಿ). [ ಚಿರ + ನಿದ್ರೆ ]

**ಚಿರನಿಧಿ** (ನಾ). ಶಾಶ್ವತವಾದ ಆಶ್ರಯ ; ಶಾಶ್ವತವಾದ ನೆಲೆ: ವಿವಿಧ ಪಯೋಜದಿ ವ್ಯರ್ಥಾಯಾಸದಿ ತೊಳಲಿದೆ ತೃಷ್ಣೆಯ ಚಿರನಿಧಿಗೆ (ಅಗ್ನಿಹಂ. ೧೧-೬). [ ಚಿರ + ನಿಧಿ ]

**ಚಿರನಿಮಿಷ** (ನಾ). ಬಹಳ ಹೊತ್ತು ಕಣ್ಣು ಮುಚ್ಚಿಕೊಂಡಿರುವುದು : ಇರ್ದುದನಿಮಿಷಜಾತಂ ಚಿರನಿಮಿಷವಾಗೆ ಕಣ್ಣುಳ್ಳವನಂ (ಅಜಿ. ೧-೪೭). [ ಚಿರ + ನಿಮಿಷ ]

**ಚಿರನೂತನ** (ನಾ). ಸದಾಕಾಲ ಹೊಸದಾಗಿರುವುದು : ಆವನ ಕಾವ್ಯ ಕನ್ನಡಕ್ಕೆ ಚಿರನೂತನ ಚಿರಂತನ (ಸಾಹಿಸ. ೦೦೯). [ ಚಿರ + ನೂತನ ]

**ಚಿರಪರಿಚಿತ** (ನಾ). ಬಹುಕಾಲದಿಂದಲೂ ತಿಳಿದಿರುವುದು : ಇದು ದಿನದಂಥ, ಚಿರಪರಿಚಿತವಾದ ಹಗಲಲ್ಲ (ಚಿತಂಬಾ. ೧) ; ಮತ್ಸ್ಯ, ಕೂರ್ಮ . . . ಕಲ್ಕಿ ಎಂಬ ದಶಾವತಾರಗಳು ಚಿರಪರಿಚಿತವಾಗಿವೆ(ಭಾರದ. ೧೯೨). [ ಚಿರ + ಪರಿಚಿತ ]

**ಚಿರಪು** 'ಸೆಟಿವು' ನೋ.

**ಚಿರಪ್ರಣಯ** (ನಾ). ಬಹುಕಾಲದ ಪ್ರೀತಿ : ಕಡೆಯಲ್ಲಿ ಒಂದು ಬಾರಿ ಮುದ್ದಿಸಿ ಚಿರಪ್ರಣಯವಿದ್ದುದರಿಂದ ಮತ್ತೆ ಮರುಗಿದವನಾಗಿ . . . ಅಳತೊಡಗಿದನು (ಕವಿಳ. ೫೨). [ ಚಿರ + ಪ್ರಣಯ ]

**ಚಿರಬಿಲ್ವ** (ನಾ). ಹುಲಿಗಿಲ ಮರ ; ಹೊಂಗೆಮರ ; ಕರಂಜವೃಕ್ಷ : ಅರನೇಟಿಲ್ ತಾಟಿ . . . ದಿಂಡಂ ಚಿರಬಿ[ಪಾಠಾಂ. ಚಿ]ಲ್ವಂ ಬ್ರಹ್ಮವೃಕ್ಷಂ ಕಟುಕ ತಟಿಯುದಿಂದೊಪ್ಪುತಿರ್ದತ್ತರಣ್ಯಂ (೧೦೪. ೦-೬೨). [ ಸಂ. ]

**ಚಿರಮಂಗಲವತಿ** (ನಾ). ಯಾವಾಗಲೂ ಮುತ್ತೈದೆತನವನ್ನುಳ್ಳವಳು : ಚೆನ್ನಮಲ್ಲಿಕಾರ್ಜುನನನ್ನು ಅಮರಪತಿಯನ್ನಾಗಿ ವರಿಸಿದಳು ; ಚಿರಮಂಗಲವತಿಯಾದಳು (ಶಾಳಬಿ. ೩೦). [ ಸಂ. ಚಿರಮಂಗಲವತೀ ]

**ಚಿರಮುತ್ತೈದೆ** (ನಾ). = ಚಿರಮಂಗಲವತಿ : ಆಯುಷ್ಮವಂತೆಯಾಗಿ ಐಶ್ವರ್ಯವಂತೆಯಾಗಿ ಚಿರಮುತ್ತೈದೆಯಾಗಿರು (ಹಂಗಾಳ್ಕ. ೧೨). [ ಚಿರ + ಮುತ್ತೈದೆ (<ಮುತ್ತೈದ್ಪ) ]

**ಚಿರರಾತ್ರ** (ನಾ). ಅಸಂಖ್ಯಾತ ರಾತ್ರಿಗಳು ; ಬಹಳ ಕಾಲ ; ದೀರ್ಘ ಕಾಲ : "ಹಲವಿರುಳಾದೆಡೆ ಗಣರಾತ್ರವೆಂಬುದು ಅಲ್ಲಿಂದಂ ಮೇಲೆ ಚಿರ ರಾತ್ರವೆಂಬುದು" (ಹಕಾಯು. ೦೮-೦೦೮). [ಸಂ.(ಚಿರ + ರಾತ್ರಿ + – )]

**ಚಿರರಾತ್ರೆ** (ನಾ). = ಚಿರರಾತ್ರ : " ಚಿರರಾತ್ರೆಯೆಂಬುದುಮಸಂಖ್ಯಾತ ದಿರುಳು " (ಮಂಗರಾ. ೨೦-೭). [ ಸಂ. ಚಿರರಾತ್ರ ]

**ಚಿರವಿಚ್ಛೇದ** (ನಾ). ಶಾಶ್ವತವಾದ ಬೇರ್ಪಡೆ,–ಅಗಲಿಕೆ : ಕಪಾಲ ಕುಂಡಲೆಗೂ ಅವಳ ಸ್ವಾಮಿಗೂ ಚಿರವಿಚ್ಛೇದ ಉಂಟುಮಾಡುವುದೊಂದೇ ಉದ್ದೇಶ (ಕಪಾಕುಂ. ೯೨). [ ಚಿರ + ವಿಚ್ಛೇದ ]

**ಚಿರವಿಲ್ವ** (ನಾ). ಚಿರಬಿಲ್ವ: "ಕರಂಜಕಾ" (ಹಂಡಿಕ). [ ಸಂ. ]

**ಚಿರಶಾಂತಿ** (ನಾ). ಶಾಶ್ವತವಾದ ನೆಮ್ಮದಿ : ಏತ್ರವು ಜೀನರಿಗಮೃತವು ಅಮೃತವು ಚಿರಶಾಂತಿ ಸಂನ್ಯಾಸಿಗಳಿಗೆ (ಇಂಚಾಪ. ೭೩-೫೩); ಮತ್ತೆ ಹಿಂದಿರುಗಲಾರದ ಆ ದೇವದೇವನ ರಾಜ್ಯದಲ್ಲಿ ಚಿರಶಾಂತಿಯನ್ನರಸುತ್ತಾ ತೆರಳಿದ್ದಳು (ಕುಟುಸಂ. ೩೦೨). [ ಚಿರ + ಶಾಂತಿ ]

**ಚಿರಸೂತೆ** (ನಾ). ಬಹುಕಾಲವಾದ ಮೇಲೆ ಕರು ಹಾಕಿದ ಹಸು; "ಚಿರಸೂತಾ, ಬಷ್ಕಯಣೀ – ೨ – ಬಹುಕಾಲಕ್ಕೆ ಈಯಲಾದ ಆಕಳಿಗೂ ಈಯದಲಾದರೂ ಬಹುಕಾಲ ಹೆರಿಗೆಯಿಲ್ಲದೇ ನಿಂತ ಆಕಳಿಗೂ, ಬಹುಕಾಲಕ್ಕೆ ೧ ಸಾರಿ ಈಯುವ ಆಕಳಿಗೂ, ಹೆಸರುಗಳು, ಕಡೆಗಂದಿನ ಆಕಳು " (ಸಿದ್ಧಾಂತಿ. ೨೩೩). [ ಸಂ. ಚಿರಸೂತಾ ]

**ಚಿರಸ್ಥಾಯಿ** (ನಾ). ಬಹಳ ಕಾಲ ತಾಳುವ ಸ್ವಭಾವವುಳ್ಳದು ; ದೀರ್ಘಕಾಲ ಉಳಿಯುವಂತಹುದು ; ಬಾಳೆ, ಶುಂಠಿ ಮುಂತಾದ ಸಸ್ಯಗಳು ಬಹುಕಾಲ ಬದುಕುವವು, ಇವುಗಳು ಚಿರಸ್ಥಾಯಿ (Perennials) ಪೈರುಗಳು (ಸಸ್ಯಶಾ. ೨೪); ದೇಶಚರಿತ್ರೆಯಲ್ಲಿ ಮಾತೆಯ ಸ್ವಾತಂತ್ರ್ಯಕ್ಕಾಗಿ ಹೋರಾಡಿದನೆಂದು ನಿನ್ನ ಹೆಸರು ಚಿರಸ್ಥಾಯಿಯಾಗಿ ನಿಲ್ಲಲಿ(ಹಿಂಕಿರು. ೨೪). [ ಸಂ. ಚಿರಸ್ಥಾಯಿನ್ ]

**ಚಿರಸ್ಥಾಯಿಸು** (ಕ್ರಿ). ಸದಾಕಾಲದಲ್ಲೂ ನೆಲಸುವಂತೆ ಮಾಡು : ನನ್ನ ಹೆಸರಂ ಜಗದಿ ನಿನ್ನಿಂ ಚಿರಸ್ಥಾಯಿಸುವೆನೆಂಬ ಪಂಥಕೇಂ ಮಣ್ಣಾಡಿಸಲೆ? (ಹರಿಶ್ಚ. ೨೬-೫೪). [ ಚಿರಸ್ಥಾಯಿ + – ಇಸು₃ ]

**ಚಿರಸ್ಮರಣೀಯ** (ನಾ). ಸದಾಕಾಲ ನೆನಸಿಕೊಳ್ಳುವಂತಹುದು : ಗುಪ್ತರ ಸೇವೆ ಚಿರಸ್ಮರಣೀಯ (ಹುಣ್ಯಾರ. ೦೦೬ ಟಿಪ್ಪಣಿ). [ ಚಿರ + ಸ್ಮರಣೀಯ ]

**ಚಿರಾತೀತ** (ಗು). ಬಹಳ ಹಿಂದೆ ಕಳೆದುಹೋದ. [ ಚಿರ + ಅತೀತ ]

**ಚಿರಾಯತ** 'ಕಿರಿಯಾತು' ನೋ.

**ಚಿರಾಯಿ** (ನಾ). ಹೊದಿಸುವ ಬಟ್ಟೆ (?) : ಚಂದ್ರನೋಪಾದಿಯಲ್ಲಿ ಬಿಳುಪಾಗಿ ಮನೋವೇಗವುಳ್ಳ ಮಹಾವೃಷಭಗಳಂ ಕಟ್ಟಿ ಚಿನ್ನದ ಚಿರಾಯಿಗಳಿಂದ ಮುಚ್ಚಲ್ಪಟ್ಟಂಥಾದ್ದಾಗಿ (ಶಿವದ. ೩೮-೪). [ <ಚೀರ₂ ]

**ಚಿರಾಯಿತ** 'ಕಿರಿಯಾತು' ನೋ.

**ಚಿರಾಯು** (ನಾ). ೧. ದೀರ್ಘಾಯುಸ್ಸು: ನಿರ್ಮಳತೆ ಚಿರಾಯು ಪ್ರೈರಿಪುರ ತೊನ್ನತೆ . . . ವಿಮುಕ್ತಿಯೆಂಬಿವಂ ಪಡೆವಂ (ರಾಜಶೇ. ೩-೧೦೦). ೨. ದೀರ್ಘಾಯುಸ್ಸುಳ್ಳವನು : ಸೂಸದೆ ಸ್ಯತುಮೆಯ್ದೆ ಪಕ್ಷವುಮವರ ಪ್ರದೇಶಮುಮಗಲ್ದಿರೆ ವಾಜಿ ಚಿರಾಯು ನಿಶ್ಚಯಂ(ಲೋಕೋಪ. ೧೧-೬೫). ೩. ಕಾಗೆ: " ಕಾಕಂ ಚಿರಕಯು . . . ಕರಟಮೆನೆ ಕಾಗೆ" (ಮಂಗರಾ. ೫೦-೩). [ ಸಂ. ಚಿರಾಯುಸ್ ]

**ಚಿರಾಯುಷ್ಮತಿ** (ನಾ). ಬಹುಕಾಲ ಬದುಕುವ ಹೆಂಗಸು : ನೀನು ಚಿರಾಯುಷ್ಮತಿಯಾಗಿರು, ನನಗೆ ಪ್ರಾಣದಾನವನ್ನು ಮಾಡಿದೆ (ಕಪಾಕುಂ. ೦೨೦). [ಸಂ. ಚಿರಾಯುಷ್ಮತೀ ]

**ಚಿರಾಯುಷ್ಯ** (ನಾ). ಬಹಳಕಾಲ ಬದುಕುವಿಕೆ ; ದೀರ್ಘಾಯುಷ್ಯ : ಶುಭಮಸ್ತು ಶೋಭನಮಸ್ತು . . . ಚಿರಾಯುಷ್ಯಮಸ್ತು(ಮುದಶಿ. ೬-೨ ಅಡಿಟಿ). [ ಚಿರ + ಆಯುಷ್ಯ ]

**ಚಿರಾಸಾಣಿ** (ನಾ). ಒಂದು ಬಗೆಯ ಓಮ ; ಖುರಾಸಾನಿ: ಲವಂಗ, ಚಿರಾಸಾಣಿ, ಓಮ, ವಾದಕ್ಕಿ, ಚವ್ಯ, ಚಿತ್ರಮೂಲ . . . ಚೂರ್ಣವ ಮಾಡಿ ತೆಗೆದುಕೊಳ್ಳುವುದು (ವಿಶ್ವವಿ. ೩೯). [ <ಖುರಾಸಾನಿ ]

**ಚಿರಿ** (ನಾ). ಒಂದು ಅನುಕರಣ ಶಬ್ದ. 'ಚಿರಿಗುಟ್ಟು'. ಮರಾ.

**ಚಿರಿಗಾವುಂಡ** (ನಾ). ಒಬ್ಬಾತನ ಹೆಸರು : ಬನವತ್ತೆಳೆಯ ಪ [ದ್ಮ] [ರ] ಸನುಂ ಅಲ್ಲಿಯ ಹಿರಿಯಕೇರಿಯ ಚಿರಿಗಾವುಂಡನುಂ ತಂಬರಸಾಯ ಗಾವುಂಡನುಂ (ಸೌಇಇ. XI-1, ೫೦-೨೩ ; 1006). [ ಚಿರಿ₀ + ಗಾವುಂಡ (<ಗಾವುಂಡ) ]

**ಚಿರಿಗುಟ್ಟು** (ಕ್ರಿ). ಚಿರ್ರೆಂದು ಶಬ್ದಮಾಡು : ಕರುಳುಗಳನು ಹಿರಿಹಿರಿದು ಅಸ್ಥಿಗಳನು ಭರದಿ ಬಿಸುಟು ರಕ್ತವನು ಚಿರಿಗುಟ್ಟೆ ಹೀರುವ ಪುಂಡರೀಕನ ಕಂಡು (ಜ್ಞಾನಸ. ೨೩-೯).

ಚಿರಿಚಿರಿಗುಟ್ಟಿಸು=ಚಿರಿಚಿರಿ ಎಂದು ಕಿರುಚುವ ಹಾಗೆ ಮಾಡು,- ಕೂಗಿ ಕೊಳ್ಳುವಂತೆ ಮಾಡು : ಮರದ ಮಾಂಗಾಯ್ಮಂಗನನು ಬಲು ಚಿರಿಚಿರಿಗುಟ್ಟಿಸದಿರೆ ನಾನು (ಶಲಾಂಡು. ೭). [ ಚಿರಿ + ಕುಟ್ಟು$_1$ ]

**ಚಿರಿಚು** (ಕ್ರಿ). ನಗು : ಉಕ್ಕಿಬರುವ ನಗುವನ್ನು ಅದುಮಿ ನಗು ; ಚಿರಿಚು (Titter. ಇಂಕನಿ). [ ದೇ.॥ ತಮಿ. ದುಲ. ಚಿರಿ ]

**ಚಿರಿಟು** 'ಸುರುಂಟು' ನೋ.

**ಚಿರಿವೇರು** 'ಚಿಱುವೇರು' ನೋ.

**ಚಿರು** 'ಚಿಱು' ನೋ.

**ಚಿರುಕುಟ** (ನಾ). ಚಿಂದಿ ; ಹರುಕು ಬಟ್ಟೆ : ಚಿರುಕುಟ [ಪಾಠಾಂ. ಚಿರಕುಟ] ಮನುಟ್ಟು ಕಯ್ಯೋಳ್ ತಿರಿದುಣುತಂ ದೆಸೆಗೆ ನಗುತುವಮಾಡುತ್ತಿಪ್ಪಾ ಮರುಳ್ (ಸಮಪ. ೧೨-೩೩).

[ ? ./ಮರಾ. ಚಿರಕುಟ, ಚಿರಕೂಟ, ಚಿರಗುಟ, ಚಿರಗೂಟ, ಚೀರಕುಟ ]

**ಚಿರುಗುಳ್ಳ** 'ಚಿಱುಗುಳ್ಳ' ನೋ.

**ಚಿರುಟು** 'ಸುರುಂಟು' ನೋ.

**ಚಿರುಪಿ** (ನಾ). ಒಂದು ಊರಿನ ಹೆಸರು : ಚಿರುಪಿಯು ಚಿನ್ನಕುಣ್ಪೆಯು ಚಿಱಿಯುವೊಲಲು ವುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆ ಯೊಡ್ಡಿನ ಕೆಟಗೆ (ಸೌಇಇ. IX-i, ೨೬-೦೦ ; 950). [ ? ]

**ಚಿರೂಟು** 'ಚುರುಟು' ನೋ.

**ಚಿರೋಟ** (ನಾ). ಮೈದಾಹಿಟ್ಟು, ತುಪ್ಪ, ಸಕ್ಕರೆಗಳನ್ನು ಕೂಡಿಸಿ ಕರಿದು ಮಾಡುವ ಒಂದು ಬಗೆಯ ಸಿಹಿ ಭಕ್ಷ್ಯ : ಮೈಸೂರಿನಿಂದಲೇ ತಯಾರು ಮಾಡಿ ತಂದಿದ್ದ ಚಿರೋಟಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು (ಮೂರಾನ. ೧೨೩).

[ ←ಮರಾ. ಚಿರೋಟೀ, ಚಿರೋಟಾ ]

**ಚಿರ್ಚ** 'ಚಿರತೆ$_1$' ನೋ.

**ಚಿರ್ಚರಿಲ್** (ನಾ). ಒಂದು ಅನುಕರಣ ಶಬ್ದ : ಇಳಾಮಂಡಲಂ ಚಿಬ್ಬುರಿಲ್ಲೆಂದೊಡೆಗುಂ (ಸೌಇಇ. XI-ii, ೧೨೬-೦೯ ; 1030).

**ಚಿರ್ಚು** 'ಚಿರತೆ$_1$' ನೋ.

**ಚಿರ್ಪುಳಿ** (ನಾ). ಒಂದು ಊರಿನ ಹೆಸರು ; ಈ ವಂದನವಲ್ಲಿ ತಾಲ್ಲೂಕಿಗೆ ಸೇರಿರುವ ಈಗಿನ ಚಿಪ್ಪಿಲಿ ಎಂಬ ಊರು : ಬಾಣರರ್ಸ ಇತ್ತ ಕಯು ಕೆಱಿಯು ನಾಲ್ವತ್ತು ವುಣಸೆ ಇದಕ್ಕೆ ಉತ್ತರ ಸಾಕ್ಷಿ ಕಣ್ಣಾಗ. × × ಕ ಯಿರು ಚಿರ್ಪುಳಿ × × × ಸಾಕ್ಷಿ ಪಡೆದೊರ್ (ಸೌಇಇ. IX-i, ೦-೩ ; ?).

[ ? ]

**ಚಿರ್ಭಟ** (ನಾ). ಒಂದು ಬಗೆಯ ಸೌತೆ ; ಮೆಕ್ಕೆಗಿಡ ವಂತ್ತು ಅದರ ಕಾಯಿ : "ಉರ್ವಾರುಃ, ಚಿರ್ಭಟಃ-ಈ ೨ ಮೆಕ್ಕೆ" (ಹಲಾಯು ೩೩-೩೬).

[ ಸಂ. ]

**ಚಿರ್ಯಾತ** 'ಕಿರಿಯಾತು' ನೋ.

**ಚಿಲಕ** 'ಚಿಲುಕ' ನೋ.

**ಚಿಲಕಡಿ** (ನಾ). ಒಂದು ಬಗೆಯ ಮರ : ಚಿಲಕಧೂಪ, ಚಿಲಕಡಿ, . . . ಧೂಪ (ವೃಕ್ಷಗಿ. ೧೩-೨೩೭). [ ? ]

**ಚಿಲಕತ್ತು** 'ಚಿಲಖತ್ತು' ನೋ.

**ಚಿಲಕಧೂಪ** (ನಾ).=ಚಿಲಕಡಿ : ಚಿಲಕಧೂಪ, ಚಿಲಕಡಿ, ಗುಗ್ಗುಳಧೂಪ, ಮಡ್ಡಿಮರ, ಮಾದಿ, ಚಿತ್ರ, ಧೂಪ (ವೃಕ್ಷಗಿ. ೦೩-೨೩೭). [ ? ]

**ಚಿಲಕಿ$_1$** 'ಚಿಲಿಕೆ$_1$' ನೋ.

**ಚಿಲಕಿ$_2$** 'ಚಿಲಿಕೆ$_2$' ನೋ.

**ಚಿಲಕು** (ನಾ). (ಉಕ) ಗಂಡಸರಿಗೆ ಉಂಟಾಗುವ ಒಂದು ಬಗೆಯ ಮೂತ್ರರೋಗ : (ಕ). [ ? ]

**ಚಿಲಕುರುಳಿ,** ಚಿನಕುರುಳಿ, ಚಿನುಕುರುಳಿ (ನಾ). ೧. ಹುರುಳಿ, ಕಡಲೆ ಮುಂತಾದ ಧಾನ್ಯಗಳನ್ನು ಹುರಿದು ಖಾರ ಹಾಕಿ ಮಾಡಿದ ಒಂದು ಖಾದ್ಯ ವಿಶೇಷ; ಹುರಿಗಾಳು: ಚಿಲಕುರುಳಿ ಮಾರೋಳಿ ತಿಲಕಬೊಟ್ಟೀನ ಕರಿಚಲುವೆ (ಜಳಯು. ೪೩). **ಚಿನಕುರುಳಿ :** ೧. ನನ್ನ ಸ್ನೇಹಿತ ಊರಿಂದ ತಂದಿದ್ದ ಚಿನಕುರುಳಿ ಬಹಳ ಸೊಗಸಾಗಿತ್ತು (ರೂಢಿ). ೨. ಒಂದು ಬಗೆಯ ಪಟಾಕಿ; ಮದ್ದಿನ ಚಟಾಕಿ: ಪಟಾಕಿ, ಚಿನಕುರುಳಿ, ಹೂಬಾಣ, ಹೂವಿನ ಕುಂಡ (ಚಂಡಮ. ೬೨-೦). ೩. (ಅಲಂ) ಹಾಸ್ಯ; ಜೋಕು: ಈ ವರ್ಷದ ದೀಪಾವಳಿ ಸಂಚಿಕೆಯಲ್ಲಿ ಚಿನಕುರುಳಿ ಸೊಗಸಾಗಿತ್ತು (ರೂಢಿ). **ಚಿನುಕುರುಳಿ :** ೧. ಚಿನುಕುರುಳಿ ಬಹಳ ಚೆನ್ನಾಗಿದೆ (ರೂಢಿ).

[ ಚಿಲಕು ? + ಹುರುಳಿ ]

**ಚಿಲಕೂಲಿ** 'ಚಿಲುಕೂಲಿ' ನೋ.

**ಚಿಲಕೆ** 'ಚಿಲಿಕೆ$_1$' ನೋ.

**ಚಿಲಖತ್ತು,** ಚಿಲಕತ್ತು (ನಾ). ಯುದ್ಧದಲ್ಲಿ ಶರೀರ ರಕ್ಷಣೆಗಾಗಿ ಹಾಕಿ ಕೊಳ್ಳುವ ಕವಚ ; ಉಕ್ಕಿನ ಕವಚ ; ತನುತ್ರಾಣ ; ಸವಂಗ : ಅವನು ಪೋಷಾಕಿನಲ್ಲಿ ಯಾವಾಗಲೂ ಚಿಲಖತ್ತನ್ನು ಪಯೋಗಿಸುತ್ತಿದ್ದನು (ಇಂಗ್ಲಇ. ೦೦೦); ಬೇರೆ ಬೇರೆ ಬಗೆಯ ಹಳೆಯ ಆಯುಧಗಳನ್ನೂ ಚಿಲಖತ್ತುಗಳನ್ನೂ ಸಂಗ್ರಹಿಸಿ ಅಲ್ಲಿಡಲಾಗಿದ್ದಿತು (ರತ್ನಗೋ. ೩). **ಚಿಲಕತ್ತು :** ಚಿಲಕತ್ತು ಒರಗತ್ತಿ ಎತ್ತಿ ದಂಡಿನ ಮಂದಿ (ಲೋಕಗೀ. ೨೦೨); ಉನ್ನೀಸಳು ಗಂಡನ ಚಿಲಕತ್ತು ಕಳೆದು ಉಪಚರಿಸುವವಳು (ನೂರಜ. ೧೭).

[ ←ಮರಾ. ಚಿಲಖತ್, ಚಿಲಕತ್; ಪಾರ. ಚಿಹಿಲ್ಕದ್ ]

**ಚಿಲಣ** 'ಚೀರಣ' ನೋ.

**ಚಿಲಣಗೆಲಸ** 'ಚೀರಣಗೆಲಸ' ನೋ.

**ಚಿಲವಾನ್** 'ಚಿಲುವಾನ' ನೋ.

**ಚಿಲಿ** (ಕ್ರಿ). ಹಲ್ಲುಬಿಡು ; ಕಿಸಿ : ಕರ್ವೊಗದೆಡೆಯ ಪಲ್ಗಳಂ ಬೆಳ್ಪನೆಯೆ ಚಿಲಿವ ಘೋರಕಿ ದೆದರಿ (ಶ್ರೀರಾಮಾ. ೧೦೭-೧೨೭). 'ಕಿರಿ$_2$' ಪರಾ. [?]

**ಚಿಲಿಕಿ** 'ಚಿಲಿಕೆ$_2$' ನೋ.

**ಚಿಲಿಕೀರೆ** 'ಚಿಲುಕೀರೆ' ನೋ.

**ಚಿಲಿಕೆ$_1$,** ಚಿಲಕಿ$_1$, ಚಿಲಕೆ, ಚಿಲುಕೆ, ಚೀಲಿಕೆ (ನಾ). ಒಂದು ಬಗೆಯ ಸೊಪ್ಪು : "ಚಿಲಿಕೆ ಸ್ವಸ್ತಿಕೆಯಕ್ಕು" (ಮಂಗರಾ. ೪೪-೪೭) ; ನುಗ್ಗೆಯ ಕಾಯ ತೊಂಡೆಯ ಕಾಯ ಚಿಲಿಕೆಯ . . . ಮೇಲೋಗರವುಣ್ಣೆಯಗ್ಗದಾ ರೋಗ್ಯವು ಪಥ್ಯ (ಸಾಳ್ವಸಾಂ. ೭). **ಚಿಲಕಿ$_1$ :** ಸೊಪ್ಪುಗಳು : ಅಗಸೆ, ಬಿಳಿಸೂಲಿ . . . ದಂಟು, ಹರಿವೆ, ಚಿಲಕಿ, ದಗ್ಗಳಿ, ಕೆಸವೆ (ನಮ್ಮನು. ೨೩೭). **ಚಿಲಕೆ :** "ಮೃದುಪತ್ರೀ-ಚಕ್ರವತ್ತ, ಚಿಲಕೆ" (ಓಷಧಿ. ೦೨೦). **ಚಿಲುಕೆ :** ಮತ್ತೆ ಕೆಲವಕ್ಕೆ ಐದನೆಯ ಬಜ್ಜೆ ಕೆಲವಕ್ಕೆ ಕತ್ತರಿಸಿದೆಳೆಕೀರೆ ಚಿಲುಕೆ [ಪಾಠಾಂ. ಚಗತೆ]ನರುವಲು ಚಕ್ರವತ್ತ ಮೊದಲಾದ ಸೊಪ್ಪಂ ತುಪ್ಪದೊಳಗೆ ಚೆನ್ನಾಗಿ ತಾಳಿಸಿ (ಸೂಪಶಾ. ೪-೨೦). **ಚೀಲಿಕೆ :** "ಚಿಲ್ಲಿಕಾ-ಚೀಲಿಕೆ" (ಓಷಧಿ. ೫೬). [ ದೇ.॥ ತೆಲು. ಚಿಲುಕ, ಚಿಲ್ಕ./ಸಂ. ಚಿಲ್ಲಿಕಾ ]

**ಚಿಲಿಕೆ$_2$,** ಚಿಲಕಿ$_2$, ಚಿಲಿಕಿ (ನಾ). ೧. (ಉಕ) ಚಾವಣಿಯನ್ನು ಹಾಕುವಾಗ ಬಿದಿರಿಗೆ ಬದಲಾಗಿ ಹಾಕುವ ಸಣ್ಣ ಗಳು ; ಸಣ್ಣ ಮರದ ಪಟ್ಟಿ ; ರಿಪೀಸು : ಬಡವರಿದ್ದವರು ಜಂತೆಗಳ ಮೇಲೆ ಚಿಲಿಕೆಗಳನ್ನು ಹಾಕಿ ಅವುಗಳ ಮೇಲೆ ಯಾವುದಾದರೂ ಒಂದು ಗಿಡದ ಎಲೆಗಳನ್ನು ಹರವಿ ಮೇಲುಮುದ್ದಿಯ ಹಾಕುವರು (ಮುಂಬಯಿ. ೪-೦೧೭). ೨. ಚಟ್ಟಿ ; "ಸಿದಿಗೆ" (ಜಾನಪದ. ೩೭). **ಚಿಲಕಿ$_2$ :** ೧. ಗಂಡಸಮಗ ಗುಜಭೀಮ ಹುಟ್ಟಿದರ ಚಿಲಕಿ ಚಿತ್ತರ ನಗತಾವ (ಗರತಿ. ೮೯). **ಚಿಲಿಕಿ :** ೧. ಬರಿಕಿ ಎಲುಗಳು ಜಂತಿಗಳು ಚಿರಳೆಲುಗಳೇ ಚಿಲಿಕಿ ಇಂತೀ ಗೃಹಕ್ಕೆ ಮಾಂಸದ ಮೇಲುಮುದ್ದೆಗಳು ರಕ್ತದ ಸಾರಣೆಗಳ (ವಚಶಾ. I, ೨೫೦-೨೪). [ ? ]

**ಚಿಲಿಕೆನೆವಾಲು** (ನಾ). ಚೆನ್ನಾಗಿ ಕಾಯಿಸಿ ಕೆನೆಗೂಡಿದ ಹಾಲು : ಇನಿದೊಸರ್ವ ತನಿಪೂವಿನೊಳ್ವಣ್ಣ ಠಸದಿ ಚಿಲಿಕೆನೆವಾಲನೆಟಿದು ಸಿರದಚ್ಚ ವುಡಿಯನ್ನುದುರಿಸಿ(ಕವಿಜ. III, ೨೦೧ ಪ್ರಭಾವತೀ ಪರಿಣಯ). 'ಚಿಲುಪಾಲು' ಪರಾ. [ < ಚಿಲು$_1$ + ಕೆನೆವಾಲು( < ಕೆನೆವಾಲ್) ]

**ಚಿಲಿಚಿಮ, ಚಿಳಿಚಿಮ** (ನಾ). ಒಂದು ಬಗೆಯ ಸಣ್ಣ ಮೀನು ; ಜಂಬು ಮೀನಂ : "ನಲಮೀನ ಚಿಲ[ಲಿ]ಚಿಮ ಎಂದೊಡೆ ಸಿಸಿಲು, ಚಿಳಿಯ ಮೀನೆಂದು ಎಂಬರು" (ನಾಚಿರಾ.೬). **ಚಿಳಿಚಿಮ:** "ನಳಮೀನಃ, ಚಿಳಿಚಿಮಃ– ಈ ೨ ಕಿಱುಮೀನ್". (ಹಲಾಯು. ೧೦೮-೩೭); "ಚಿಳಿಚಿಮವೆನಲು ನಳಮೀನ ವೆನೆ ಕಿಱುಮೀನ ಪೆಸರೆನಿಕ್ಕು" (ಮಂಗರಾ. ೧೨೧-೭); ವಿಸ್ಫುರತ್ಪೇನದೊಳಂ ಚಳಚ್ಚಿಳಿಚಿಮದೊಳಂ . . . ಅತಿಮನೋಹರವಾದ ಯಮುನಾಹ್ರದ ಪರಿಸರಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ (ಜಗವಿ. ೫-೧೦ ೩ವ); ಪುಟನೆಗೆದು ಮಗುಟುಟುವ ಚಿಳಿಚಿಮಾನೀಕದಿಂ (ಉದ್ಭಟ. ೩-೮೪).

[ ಸಂ. ]

**ಚಿಲಿಪಾಲು** 'ಚಿಲುಪಾಲ್' ನೋ.

**ಚಿಲಿಪಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: "ಪಕ್ಕಿಗಳುಲಿಗಕ್ಕು ನಾಮ ಚಿಲಿಪಿಲಿಯೆನುತುಂ" (ಕವಿಕಂ. ೬೩); ಚಿಲಿಪಿಲಿ ಹಾಡಿಗೆ ಗುಬ್ಬಿಯ ಥಕ ಥೋಂ ಧಿಕ್ಕಿಟ್ಟಿ (ಮೂಂದಳಿ. ೪೩-೧) ; ಅಲ್ಲೊಂದು ಇಲ್ಲೊಂದು ಹಕ್ಕಿಗಳ ಚಿಲಿಪಿಲಿ ಕೂಗು ಅವನ ಕಿವಿಗೆ ಕಚಕುಳಿಯಾಡಿಸಿ ದಂತಾಯಿತು (ಶೀವೋಢ. ೧೦).

**ಚಿಲಿಪಿಲಿಗುಟ್ಟು** (ಕ್ರಿ). ಚಿಲಿಪಿಲಿ ಎಂದು ಧ್ವನಿಮಾಡು : ಚಿಲಿಪಿಲಿಗುಟ್ಟಿ ನುಣ್ಪೊದಳ್ಗಳಿಂ ಕಿವಿಗಿಂಪನೊಡರ್ಚೆ (ದಶಕು. ೧-೫೭) ; ಹಕ್ಕಿಗಳೆಲ್ಲಾ ಸಂತೋಷದಿಂದ ಚಿಲಿಪಿಲಿಗುಟ್ಟಿ ಕೂಗುತ್ತಾ ಹಾರಾಡುತ್ತಿದ್ದವು (ಕಳಹು.೨); ಇತರ ಹಂಸಪಕ್ಷಿಗಳು . . . ಚಿಲಿಪಿಲಿಗುಟ್ಟುತ್ತಾ ಹಾರಿಹೋದವು (ಹಂಕಿರು. ೩೭). [ ಚಿಲಿಪಿಲಿ + ಕುಟ್ಟು$_1$ ]

**ಚಿಲಿಪಿಲಿಗುಡು**(ಕ್ರಿ).(ಆಲಂ) ಹಕ್ಕಿಯು ಚಿಲಿಪಿಲಿಗುಟ್ಟುವಂತೆ ಸಂತೋಷ ದಿಂದ ಕೂಡಿರು,–ಆನಂದದಿಂದಿರು : ಮನಸ್ಸು ಸಂತೋಷದಿಂದ ಚಿಲಿಪಿಲಿಗುಡುತ್ತಿದ್ದ ದಿನ (ರಂಗಹ. ೧೨೪).

[ ಚಿಲಿಪಿಲಿ + ಕುಡು$_1$( < ಕೊಡು$_1$) ]

**ಚಿಲಿಪಿಲಿಹಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಕೊಟ್ಟು : "ಚಾಷಃ = ಚಿಲಿಪಿಲಿಹಕ್ಕಿ" (ಕಾಶಕ್. ೧೫೭). 'ಚಿಲಿಮಿಂಲಿಗ' ಪರಾ.

[ ಚಿಲಿಪಿಲಿ + ಹಕ್ಕಿ$_1$( < ಪಕ್ಕಿ$_1$) ]

**ಚಿಲಿಮಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: "ಚಿಲಿಮಿಲಿಯೆಂದು ಪಕ್ಕಿಗಳುಲುಹು" (ಕಶಸಾ. ೩-೧೫ ) ; ಸಮಸ್ತಧಾತ್ರಿ ಯುಮನಾಳಿಪೆವೆಂದುಲಿವಂತೆ ಪಕ್ಕಿಗಳ್ ಚಿಲಿಮಿಲಿಯೆಂಬ ಪೊಟ್ಟಱೊಳೆ ಬಂದುಱಿದೊಡ್ಡಿದನಂತಕಾತ್ಮಜಂ (ಪಂಪಭಾ. ೧೧-೩೩) ; ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ ನೀವು ಕಾಣಿರೇ (ಮಹಾದೇ. ಬ. ೩೩-೭೩).

**ಚಿಲಿಮಿಲಿಗ, ಚಿಲುಮಿಂಲಿಗ** (ನಾ). ಚಿಲಿಮಿಲಿ ಎಂದು ಶಬ್ದಮಾಡುವ ಒಂದು ಬಗೆಯ ಹಕ್ಕಿ ; ಕೊಟ್ಟು ; ಚಾಷ : ಗೌಜು ಪಾರಿವ ನಿರಿಲೆ ಸಾಳುವ ಚಿಲಿಮಿಲಿಗ ಚಂಬೋತ . . . ಗರಿಗ ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುವ್ಯಾಅ. ೨೦-೫೩) ; ವಲಿಯ ಭಾರದ್ವಾಜ ಪಿಕ ಪಿಂಗಲಿ ನಿಶಾಟಧ್ವಾಂಕ್ಷ ಚಾತಕಿ ಚಿಲಿಮಿಲಿಗ ಜಾಣ್ಹಕ್ಕಿ . . . ಮಡಗೊಳಲಿ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩-೧-೩೩). **ಚಿಲುಮಿಲಿಗ :** ಹರಡೆ ಚಿಲುಮಿಲಿಗನು ಚಿಲುವೆ ಗಿಜುಗಿರಳೆ ಕವ್ಮರನಸಗ . . . ಪಕ್ಕಿಗಳವಱೊಳೊಪ್ಪಿದವು (ಸಾಳ್ವಭಾ. ೫-೨೧).

[ ಚಿಲಿಮಿಲಿ + – ಗ$_2$ ]

**ಚಿಲಿಮಿಲಿಸು** (ಕ್ರಿ). ಚಿಲಿಮಿಲಿ ಎಂದು ಧ್ವನಿಮಾಡು: ಬಳಸಿ ಚಿಲಿಮಿಲಿಪ ವಿಹಗಂಗಳ ಕಳಕಳದೊಡನೆ ತೊಡರ್ದು . . . ತೀಡಿತ್ತು ಸುಪ್ರಭಾತ ಸಮೀರಂ (ಕುಸುಮಾ. ೪-೭೦) ; ಬಳಸಿ ಚಿಲಿಮಿಲಿಪ ವಿಹಗಂಗಳ ಕಳಕಳ ದೊಡನೆ ತೋರ್ದು ಸರಸೀಜಳಮಂ ಪಳಿಗೊಳಿಸಿ ಕುಮುದ ಮುಖಮಂ ಪೆಳಱಿಸಿ ತೀಡಿತ್ತು ಸುಪ್ರಭಾತ ಸಮೀರಂ (ಶಾಂತೀಶ್ವ. ೧೧-೯೫).

[ ಚಿಲಿಮಿಲಿ + – ಇಸು$_3$ ]

**ಚಿಲಿಮೆ$_1$** 'ಚಿಲುಮೆ$_1$' ನೋ.

**ಚಿಲಿಮೆ$_2$** 'ಚಿಲುಮೆ$_2$' ನೋ.

**ಚಿಲಿವಾಲು** 'ಚಿಲುಪಾಲ್' ನೋ.

**ಚಿಲು$_1$** (ಕ್ರಿ). ೧. ಅನ್ನದಂತೆ ಚೆನ್ನಾಗಿ ಬೇಯು. ೨. ಚೆನ್ನಾಗಿ ಕುದಿ,– ಕಾಯು. 'ಚಿಲುಪಾಲ್' ಪರಾ. [ ದೇ.॥ ತಮಿ. ಚಿಲು ]

**ಚಿಲು$_2$** (ನಾ). (?) : "ಗೋಧಾಸ್ತನ್ಯಃ–ಚಿಲು" (ಓಷಧಿ. ೫೧). [ ? ]

**ಚಿಲುಕ, ಚಿಲಕ, ಚಿಲುಕು$_1$** (ನಾ). ೧. ಕದವನ್ನು ಭದ್ರಪಡಿಸುವುದಕ್ಕಾಗಿ ಉಪಯೋಗಿಸುವ ಕೊಂಡಿ,–ಸರಪಣಿ : ಕದವ ಮುಚ್ಚಿದಳಿದಕೋ ಚಿಲುಕ ಅಲ್ಲಾಡುತಿದೆ (ಪುರಂದ. ೨-೯೭ ಅನುಪಲ್ಲವಿ). ೨. ಬೇಟೆಯಲ್ಲಿ ಉಪಯೋಗಿಸುವ, ತುದಿಯಲ್ಲಿ ಮುಳ್ಳಿನಂತೆ ಮೊನೆಯಿರುವ ಒಂದು ಉಪಕರಣ; ಈಟಿ; ಬರ್ಜಿ (?) : ತಡಿಕೆ ತಳಿಯು ಅಂಟಿನ ಕಣಿ ಚಾಳುವ ಹಿಡಿದ ದೀಹವು ಪಾಚಿ ಸಿಡಿಯು ಹೊಡೆದೆತ್ತುವ ಮೊಲ ಎಸೆವ ಚಿಲುಕಗಳು ಬಿಡುಗಣ್ಣ ಬೇಡರೊದಗಿತು (ಹರಿಶಾಂ. ೨-೨). **ಚಿಲಕ:** ೧. ಅತ್ತೇಮನೇಲಿ ಹೇಗಿರುವೆ ಮಗಳೇ ಅಂದ್ರೆ ಚಿಲಕಕ್ಕೆ ಮೊಳಕೈ ತಗುಲಿದ ಹಾಗೆ ಅಂದ್ಲು (ಹುಟ್ಟಹ. ೧೦೩). **ಚಿಲುಕು$_1$ :** ೨. ಮದನನ ನನೆಯಂಬು ಮುನಿಹೃದಯಮಂ ನಡಪೆನುತ್ತೆ ಚಿಲುಕಿನ ದೊಡ್ಡ ಮೊನೆಯಂಬ ನಾಗಿಸಿದನೋ ಯೆನಲ್ . . . ಹೊಂಗೇದಗೆಗಳೊಪ್ಪಿದುವು ತರತರಮೊಳ್ (ಚಬಪು. ೪೫-೧೮). [ ದೇ.॥ ತಮಿ. ಮಲ. ಚಿಲುಕ್ಕು ; ತುಳು. ಚಿಲ್ಕ್ ; ತೆಲು. ಚಿಲಕ, ಚಿಲುಕು, ಚಿಲುಕೆ ]

**ಚಿಲುಕವರೆ** (ನಾ). ನೀರಿನಲ್ಲಿ ನೆನಸಿ ಸಿಪ್ಪೆ ತೆಗೆದ ಅವರೆಕಾಳು ಮತ್ತು ಅದರಿಂದ ಮಾಡಿದ ಒಂದು ಬಗೆಯ ಮೇಲೋಗರ : ಇಂದು ನಮ್ಮ ಮನೆಯಲ್ಲಿ ಚಿಲುಕವರೆ ಮಾಡಿದ್ದರು (ರೂಢಿ). 'ಚಿದಕವರೆ' ಪರಾ.

[ ಚಿಲುಕು$_2$ + ಅವರೆ$_1$ ]

**ಚಿಲುಕಾಯಿ** (ನಾ). ಗಿಳಿ (?) : ಯಾಕತ್ತೆ ನನ್ನ ಗೋಪೀದೇವಿ ಕಂದಯ್ಯ ಗೋಪುರದಲ್ಲಾಡೊ ಚಿಲುಕಾಯಿ ಚಿಂತಾಮಣಿ ಹಸುಳೆ ಬಂದಾಡೊ ತೊಡೆ ಮೇಲೆ (ಹಳ್ಳಿಯ. ೮೯). [ ?./ತೆಲು. ಚಿಲುಕ, ಚಿಲ್ಕ ]

**ಚಿಲುಕಿಸು** (ಕ್ರಿ). ಕಾಳಿನ ಮೇಲಿರುವ ಸಿಪ್ಪೆ ತೆಗೆ, – ಸಿಪ್ಪೆ ಬಿಡಿಸು : ಚಿಲುಕಿಸಿದ ಅವರೆಕಾಳು ಬಹುರುಚಿ (ರೂಢಿ).

[ ಚಿಲುಕು$_2$ + – ಇಸು$_3$ ]

**ಚಿಲುಕೀರೆ, ಚಿಲಿಕೀರೆ** (ನಾ). ಒಂದು ಬಗೆಯ ಸೊಪ್ಪು : "ಶೋಧಿನೀ– ಚಿಲುಕೀರೆ" (ಓಷಧಿ. ೧೭೨) ; ಚಿಲುಕೀರೆ ಸೊಪ್ಪು ಸಿಹಿಪಾಲೆ ಸೊಪ್ಪು ಚಕ್ರವರ್ತಿ ಪುಳಂಪುರುಚಿ ಜಾಂಗಲಮಾಂಸ . . . ಯಿಷ್ಟು ಪಥ್ಯ ಕರವಹುದು (ವಿಷಚಿ. ೦೩-೩). **ಚಿಲಿಕೀರೆ :** ಚಿಲಿಕೀರೆಯ ಸೊಪ್ಪಿನ ರಸದಲ್ಲಿ ಒಂದು ಜಾವ ಮರ್ದಿಸಿ ಸಾಸಿವೆ ಪ್ರಮಾಣ ಗುಳಿಗೆಯಂ ಮಾಡಿ ಸಮಜ್ವರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು (ವಿಶ್ವವಿ. ೩೭); ಚಕ್ರವರ್ತಿದ ಸೊಪ್ಪು, ಚಿಲಿಕೀರೆ ಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕಚ್ಚಿ. ೧೦೨). [ ←ತೆಲು. ಚಿಲುಕಕೂರ ]

**ಚಿಲುಕು$_1$** 'ಚಿಲುಕ' ನೋ.

**ಚಿಲುಕು$_2$** (ನಾ). ಸಿಪ್ಪೆ ; ಪೊರೆ. 'ಚಿಲುಕಿಸು', 'ಚಿದಕು$_2$' ಪರಾ.

[ ? ]

**ಚಿಲುಕೊಲಿ,** **ಚಿಲಕೊಲಿ** (ನಾ). ಒಂದು ಬಗೆಯ ಹಕ್ಕಿ : ಶರ್ಬಿಕ್ಕೆ ಹೆಂಗುರು ಕಾಕಂ ಚಿಲುಕೊಲಿ ರತ್ನಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೩-೩೯) ; ಪಾರಾವತಂ ಪರಪುಟ್ಟಂ ಚಿಲುಕೊಲಿ ಚಾತಕವು ವಿರ್ಕುಂ (ಯಾದವ. ೪-೩೩) ; ಗರುಡಂ ಶರಾರಿ ಚಿಲುಕೊಲಿ ಪಿಕಳಂ ಬಕಂ (ಕುಮಾಪು. ೪-೧೯೬). **ಚಿಲಕೊಲಿ :** ಅಂಚೆಯ ಚಿಂಬೋತನ ಚಿಲಕೊಲಿಯ ಕೊಂಚೆಯ ಗಿಳಿ ಕೊಳರ್ವಕ್ಕಿಯ ಪುರುಳಿಯ (ಹಮ್ಮಿ.ರ. ೪-೧೨ ರಗಳೆ). [?]

**ಚಿಲುಕೆ** 'ಚಿಲಿಕೆ₁' ನೋ.

**ಚಿಲುತಲಿ** (ನಾ). ಒಂದು ಬಗೆಯ ಆಯುಧ : ಸಂಣ ಚಂದ್ರಾಯುಧಾ ಚಿಲುತಲಿ ಮೊದಲಾದಾ ಬತ್ತೀಶಾಯುಧಾ (ಎಪಿ. XVI, ಗುಲ್ಬ. ೭೪-೨೩ ; ಸು. 1776). [?]

**ಚಿಲುಪಾಲ್,** **ಚಿನಿಪಾಲು,** **ಚಿನಿವಾಲ್,** **ಚಿನಿವಾಲು,** **ಚಿಲಿಪಾಲು,** **ಚಿಲಿವಾಲು,** **ಚಿಲುವಾಲು,** **ಚಿಲುಹಾಲು** (ನಾ). ನೀರು ಇಂಗುವಂತೆ ಚೆನ್ನಾಗಿ ಕಾಯಿಸಿದ ಹಾಲು ; ಕೆನೆಹಾಲು : "ಕಾಯೆ ಬತ್ತಿದ ಹಾಲು ಚಿಲು[ಪಾಠಾಂ. ಚಿರ]ಪಾಲೆನಿಕ್ಕು" (ಮಂಗರಾ. ೩೪-೨) ; ಸಗ್ಗದಮರ್ದಿನ ಕೊಳಂ ಮೇಲ್ವಾಯ್ದು ಮಿಸುಪ ಚಿಲುಪಾಲ್ಗೆ ನೆಗಳಂ ನೆಱಿದಾರೆಯಿಟ್ಟಪೋ (ವೀಕ್ಷೃಪು. ೩-೯-೩೪). **ಚಿನಿಪಾಲು :** ಇನಿದಾದ ಚಿನಿಪಾಲು ಪೀರ್ವರಸಂಚಿ ಹುಳಿಗಂಗೆಯ ಕುಡಿವುದೇ (ಸರ್ವಜ. ೧೯೩-೯೦೦) ; ಕಾಸಿ ಚಿನಿಪಾಲಂ ಕೊಡುವವಳು ನಿಮಗೆ ಕೊಡಗೂಸು (ಬಸಪು. ೯-೩೮) ; ಸಕ್ಕರೆಯ ಜೇನ ಸವಿಗಿಮ್ಮಿಗಿಲು ಕೆನೆಗಟ್ಟಿ ವೃಕ್ಕುಕ್ಕಿ ಕಾಯ ಚಿನಿಪಾಲ ರುಚಿಗಿಂದಧಿಕ (ಸವವೋ. ೦-೨) ; ಸಕ್ಕರೆ ಚಿನಿಪಾಲು ತುಪ್ಪವ ಯಿಕ್ಕೊಡನೀರ್ವರು ಸವಿದು (ಕರಿಕೆ. ೩೮-೩). **ಚಿನಿವಾಲ್ :** ಚಿನಿವಾಲ್ಗೆನೆ ಸದ್ಘೃತಂಗಲಸಿ ದಂದದೊಳೆನ್ನ ಕೃತಿರಸಂ ನಾಡೆ ಸವಿಗೊಳಿಸುವುದು (ಪಂದಿಮಾ. ೦-೩೦). **ಚಿನಿವಾಲು :** "ಲಿಂಗಮೂರ್ತಿ ಇನ್ನೊಬ್ಬರಿಗೆ ಶಿವ ಕಾರುಣ್ಯ" ಎಂಬ ಆ ಚಿನಿವಾಲನ್ನು ಕೊಡಲು ಯತ್ನಿಸುವವನೇ ಹೊರತು ಹುಳಿಯನ್ನು ಕೊಡನು (ಕರ್ನಾಕೆ. ೧೨೦). **ಚಿಲಿಪಾಲು :** ಶಿವಮ್ಮಡನಾಮ ಶಿವಜ್ಞಾನ ವೆಂಬ ಚಿಲಿಪಾಲನಾರೋಗಿಸುವ ಪರಹಿತದಿಂದ (ರು ದ್ರ ಭಾ . ೯೨) ; ಚಿಲಿಪಾಲು ಸಕ್ಕರೆಯಂ ಸುಲಿದ ಬಾಳೆಯ ಹಣ್ಣ ಕಲಸಿ (ಗುರುಬೋ. ೮೦) ; ಚಿಲಿಪಾಲಿನೊಳಗೆ ಶರ್ಕರೆವೆರದು ಪರಿಮಳಂ ಕಲಿತಮೆಂದೆನಿಸುತಿರಲೀಂಟ ನಾಲಗೆದಣಿದು ಸುಲಭದಿಂ ನೆನೆದಪುದೆ ದೇವ (ವಂಕಾರಾ. ೩-೦-೨) ; ಶರ್ಕರೆವೆರಸಿ ಚಿಲಿಪಾಲೀವ ಸಿರಿಯೆನಗಹುದೆಯೆಂದು (ಚಿನಧಾ. ೩೦-೯). **ಚಿಲಿವಾಲು :** ತುಪ್ಪ ಸಕ್ಕರೆ ಚಿಲಿವಾಲ ಸವಿಪ್ಪೋಲುಂ ಪೊಪ್ಪುಕಥೆಯ ಪೇಳುವೆನು (ರಾಮವಿ. ಅನುಬಂಧ ೩.೨೦-೬). **ಚಿಲುಪಾಲು :** ರಸವೊಸರ್ವ ಮುಪ್ಪಳಮಂ ಚಿಲುಪಾಲ ತಿರುಳ ಕರಣೆಗಳುಮಂ . . . ಒಂದುಗೂಡಿ (ಸಂಬಿರ. ೦೦-೩೩) ; ಚಿಲುಪಾಲಿನೊಳು ವಿಷಂ ತವರಾಜನೊಳು ಕೃಪೆ (ಭಾವಚಿಂ. ೯-೩) ; ಗುಟ್ಟುಡರದೆ ಕಾದ ಚಿಲುಪಾಲು ಮಕ್ಷಿಕೋಚ್ಛಿಷ್ಟವಿಲ್ಲದ ಜೇನುತುಪ್ಪ (ಪೋಡಶ. ೨೩-೧) ; ಚಿಲುಪಾಲು ತಂಬಾಲು ಕೆನೆವೆರಸಿದ ಪಾಲುಂ (ಸಂಪವಿ. ೮-೯೧). **ಚಿಲುಹಾಲು :** ಬಟ್ಟಹಾಲು, ಚಿಲುಹಾಲು, ಕೆನೆಹಾಲು, ಎಟ್ಟೆಹಾಲು, ತನಿಹಾಲು ಮುಂತಾದ ತರತರದ ಹಾಲು ಗಳನ್ನು ಬಟ್ಟಲು ಬಟ್ಟಲು ತುಂಬಿ ತಂದು ಎಡೆ ಮಾಡಿದಳು(ಮೂಮುಲ್ಲ. ೫೪).
[ ಚಿಲು₁ + ಪಾಲ್₁ ]

**ಚಿಲುಹಾಲು** 'ಚಿಲುಪಾಲ್' ನೋ.

**ಚಿಲುಮಿಲಿಗ** 'ಚಿಲಿಮಿಲಿಗ' ನೋ.

**ಚಿಲುಮುರಿ** (ನಾ). ಗೋಧಿಯ ಹಿಟ್ಟಿನಿಂದ ಮಾಡಿ, ತುಪ್ಪದಲ್ಲಿ ಕರಿದ ಒಂದು ಬಗೆಯ ಭಕ್ಷ್ಯ : ನೆಱಿ ಸಣ್ಣ ಗೋದುವೆಯ ಹಿಟ್ಟ ಸಿಹಿವಾಲೊಳಗೆ ನುಱುಗುವಂದದಿ ಕಲಸಿ . . . ತುಪ್ಪದೊಳಗಡಲು ಚಿಲುಮುರಿಯಾದುದು (ಸೂಪಶಾ. ೦-೩೩). [?]

**ಚಿಲುಮೆ₁,** **ಚಲಮೆ,** **ಚಲುಮೆ,** **ಚಿಲಿಮೆ₁** (ನಾ). ೧. ನೀರು ಉಕ್ಕುವ ಸ್ಥಳ ; ಬುಗ್ಗೆ ; ತಲಪರಿಗೆ ; ಒರತೆ ; ಊಟೆ : ಕಲ್ಲ ಮೊರಡಿಯೊಳಗೆ ಚಿಲುಮೆಯಗ್ಗವಣಿಯುಂಟೆ ಅಯ್ಯಾ (ಅದಾಸ. ೧೩-೨೦) ; ನಿತ್ಯ ಚಿಲುಮೆಯ ತೋಡುವಾತಂಗೆ ಉಚ್ಚೆಯ ಬಚ್ಚಲ ತೋಡಲಾಗದು (ಶಿವಮಂ. ೩೯) ; ಬಱಿತಿರ್ದ ಚಿಲುಮೆಯ ನೀರನಿತ್ತು ಜಂಗಮಕೆ (ಚಬಪು. ೩೭-೭). ೨. ಕಾರಂಜಿ: ಅದರ ಮುಂಭಾಗದಲ್ಲಿ ನೀರಿನ ಚಿಲುಮೆ (Fountain) ಯೊಂದನ್ನು ಇಟ್ಟಿದ್ದರು (ಕಲಾಸಾ. ೩೭). **ಚಲಮೆ:** ೧.ಮಳಲಿನ ಮಱಿಯ ನೀರ ಬಳಸದೆಸಲೆ ವೃಧ್ಧಿಯಲ್ಲಿ ನೆಲ ಚಲಮೆಯುಂ ಕಂಡು (ಏಲೇಕ್ಯ. ೦೯) ; ಕಲ್ಲ ಹಳ್ಳದೊಳುಂಟೆ ಚಲಮೆ ಕಾಣ್ಬುದೆ ಗೂಗೆ ರವಿಯು (ವೀಕ್ಷೃಪು.೪-೩-೫೨) ; ಹರುಷದಿಂದಾ ಮಳಲ ಬಗಿದು ಚಲಮೆಯ ತೆಗೆವರೆಬರು(ಸಿದ್ಧೇಪು. ೦೯-೮). **ಚಲುಮೆ :** ೧. ಬಹು ಜಲಮಂ ಬಿಟ್ಟು ಚ[ಪಾಠಾಂ. ಚಿ]ಲುಮೆಯಂ ತೆಗೆದರೆ ಅದು ನೆಲಶುದ್ಧ ಸೌಕರ್ಯವಲ್ಲದೆ ಅವು ಶೀಲವಲ್ಲ (ಮುಡಿಮಾ. ೦೮-೨೩) ; ಕೂಪಕರಾಃ, ವಿದಾರಕರಾಃ – ೨ ಚಲುಮೆಗಳಾಗಿ ತೋಡಲ್ಪಟ್ಟ ಮರಳು ಹಳ್ಳ ಮುಂತಾದುವುಗಳು ನೀರೂರಿ ಬರುವ ಹಳ್ಳಗಳು (ಸಿದ್ಧಾಂತಿ. ೭೦). **ಚಿಲಿಮೆ₁ :** ೨. ನಗರದ ಕೇಂದ್ರ ಸ್ಥಳಗಳಲ್ಲಿ ನೀರಿನ ಚಿಲಿಮೆಗಳನ್ನು ನಿರ್ಮಿಸಿದ್ದಾರೆ (ರೂಢಿ).
[ ದೇ.ಶ ತೆಲು. ಚಿಲಮು ; ಕುವಿ. ಸಲ್ಮ ]

**ಚಿಲುಮೆ₂,** **ಚಿಲಿಮೆ₂** (ನಾ). ತಂಬಾಕು ಸೇದಲು ಉಪಯೋಗಿಸುವ ಮಣ್ಣಿನ ಕೊಳವಿ,–ನಳಿಕೆ : ಚಿಲುಮೆ ದೊರೆಯುವುದು, ಎಷ್ಟು ಹುಡುಕಿದರೂ ಕಡ್ಡಿಪೆಟ್ಟಿಗೆ ದೊರೆಯಲೊಲ್ಲದು (ಕಮ್ಮಟ. ೪) ; ಕೈಯಲ್ಲಿ ಚಿಲುಮೆ ಯನ್ನು ಹಿಡಿದುಕೊಂಡು ಲಗುಬಗೆಯಿಂದ ಅವಳ ಬೆನ್ನು ಹತ್ತಿ ಹೋಗುತ್ತ ಅಂದ (ಅಪೋಕ. ೦೦). **ಚಿಲಿಮೆ₂ :** ತಂಬಾಕವೇ ಇಲ್ಲ, ಚಿಲಿಮೆಯಲ್ಲಿಂದ ಬರಬೇಕಂ (ಕುರಿಹಿಂ. ೭೦).
[ ←ಪಾರ. ಹಿಂ. ಚಿಲಮ್ ; ಮರಾ. ಚಿಲಮ್, ಚಿಲಿಮಿಾ, ಚಿಲೀಮ್ ]

**ಚಿಲುವಾನ,** **ಚಿಲವಾನ್,** **ಚಿಲುವಾನು** (ನಾ). ೧. ಪೂರ್ಣವಾದ ಹಣದ ಭಾಗ ; ಚಿಲ್ಲರೆ ಹಣ : ಚಿಲುವಾನಂ ಬಿನುಗುಗಳಿಗೆ ನಾನಾ ಜಾತಿಯ ಪೊಕ್ಕಲುಗಳಿಗೆ ವರುಷ ೧ ಕೆ (ಸೌಇಇ. IX-ii, ೫೦೬-೩ ; 1525). ೨. ಚಿಲ್ಲರೆ ; ಸಣ್ಣ ; ಅಲ್ಪ : ಅರೆವೊದಲಹ ಚಿಲುವಾನಂ ಬರೆ ಲೆಕ್ಕದ ಕಡೆಯೊಳಗಲ ನೀಳನ ಸಂಖ್ಯೆಕ್ಕಿರದೆ ಪರಸ್ಪರದಿಂದಾ (ವ್ಯವಹಾ. ೮ ಕ್ಷೇತ್ರಗಣಿತ) ; ಯಿವರೆಲ್ಲರಿಗೆ ಸಲುವ ಚಿಲುವಾನ ಕೊಡಗಿಗಳು (ಎಕ. IX, ನೆಲಮಂ. ೮೧-೦೩ ; 1545) ; ಚಿಕ್ಕಿಗನಂ ಪಿಡಿದಾರ್ಜಿಸಿದರ್ಥದ ಚಿಲುವಾನ ದೊಳಿನ್ನೇನಹುದು (ಧಕ್ಷಿ.ಸ. IV, ೦೨). **ಚಿಲವಾನ್:** (೩). **ಚಿಲುವಾನು:** ೨. ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚಿಲುವಾನು ಆಳು ಉಂಟಷ್ಟೆ(ರಾಜೇಂದ್ರ. ೭೩).
[ ?./ತಮಿ. ಚಿಲುವಾಣ, ಚಿಲ್ಲಾಣ, ಚಿಲ್ವಾಣ ; ಮಲ. ಚಿಲ್ಲಾನ ; ತುಳು. ಚಿಲುವಾನ, ಚಿಲ್ವಾನ ; ತೆಲು. ಚಿಲುವಾನ, ಚಿಲುವಾಯನ. /ಮರಾ. ಚಿಲವಣಾ, ಚಿಲ್ಲವನಾ, ಚಿಲವಾನ್, ಚಿಲವಾಣ್ ]

**ಚಿಲುವಾನಪೈರು** (ನಾ). ಅವರೆ, ಹುರುಳಿ, ಕಡಲೆ, ಕೊತ್ತುಂಬರಿ ಮುಂತಾದ ಚಿಲ್ಲರೆ ಧಾನ್ಯದ ಬೆಳೆ ; ಚಿಲ್ಲರೆ ಪೈರು (?) : ಸೊಪ್ಪಿನ ತೋಟ ಚಿಲುವಾನಪೈರು ಉಪಧ್ರಾವುಗಳ ಹೆಚ್ಚು ಹುಟ್ಟುವಳಿ ಕೆರೆಗಳ ಹೆಚ್ಚು ಹುಟ್ಟುವಳಿ ಮುಂತಾದ ಸಕಲ ಸ್ವಾಮ್ಯಂಉ (ಎಕ. III, ತಿರುಮ. ೩೩-೦೩೭೦ ; 1748). [ ಚಿಲುವಾನ + ಪೈರು (<ಪಯಿರ್) ]

**ಚಿಲುವಾನಸುಂಕ** (ನಾ). ಚಿಲ್ಲರೆ ಸುಂಕ ; ಸಣ್ಣ ಪುಟ್ಟ ಬಾಬಿನ ತೆರಿಗೆ : ತಳವಾಱಿಕೆ ಅಳಿವಾಱಿನ್ಯಾಯಸಭೆಯ ಸಂಪಿಯ ಚಿಲುವಾನಸುಂಕ ಸೋಡಿಗೆ ಇವು ಮೊದಲು (ಎಕ. V, ಹಾಸನ. ೨-೦೮ ; 1563).
[ ಚಿಲುವಾನ + ಸುಂಕ ]

**ಚಿಲುವಾಸು** 'ಚಿಲುವಾನ' ನೋ.

**ಚಿಲುಹಾಲು** 'ಚಿಲುಪಾಲ್' ನೋ.

**ಚಿಲೈತ** 'ಚೀಲೈತ' ನೋ.

**ಚಿಲ್ಕರಿವೆ** 'ಚಿಲ್ಕುಹರಿವೆ' ನೋ.

**ಚಿಲ್ಕುಹರಿವೆ, ಚಿಲ್ಕರಿವೆ** (ನಾ). ಒಂದು ಬಗೆಯ ಸೊಪ್ಪು; ಕಿರುಕು ಸಾಲೆ: ಹರಿವೆಸೊಪ್ಪು, ಚಿಲ್ಕುಹರಿವೆಸೊಪ್ಪುಗಳಲ್ಲಿ ಎರಡು ವಿಧಗಳಿವೆ (ಕಕಕ. ೦೬). **ಚಿಲ್ಕರಿವೆ:** ಹರಿವೆ ಸೊಪ್ಪು, ದಂಟು ಸೊಪ್ಪು, ಚಿಲ್ಕರಿವೇ ಸೊಪ್ಪು (ಕ್ಷು.ಕಗಿ. ೬-೯೨). [ ಚಿಲ್ಕು ? + ಹರಿವೆ ]

**ಚಿಲ್ಪ** (ನಾ). ೧. ಸಣ್ಣವನು; ಚಿಕ್ಕವನು: ಈ ಚಿಲ್ಪ ಈಸಲ ಮೊದಲ ಬಹುಮಾನ ಪಡೆದಿದ್ದಾನೆ (ರೂಢಿ). ೨. ಕುಳ್ಳಾದ ಎತ್ತು; ಗಿಡ್ಡ ಎತ್ತು: ನೇಗಿಲಿಗೆ ಹೂಡಿರುವ ಚಿಲ್ಪಗಳು ಒಳ್ಳೆ ಬಲಿಷ್ಠವಾಗಿವೆ (ರೂಢಿ). (ಗು). ೩. ಸಣ್ಣದಾದ; ಚಿಕ್ಕದಾದ: ಈ ಚಿಲ್ಪಹುಡುಗ ಬಹಳ ಬುದ್ಧಿವಂತ (ರೂಢಿ). [ ? ]

**ಚಿಲ್ಪಾರಿ** 'ಚಿಲ್ಪೇರಿ' ನೋ.

**ಚಿಲ್ಪೇರಿ, ಚಿಲ್ಪಾರಿ, ಚುಲ್ಪಾರಿ** (ನಾ). ಸಣ್ಣವನು; ಚಿಕ್ಕವನು: ನಿಮ್ಮಂಥ ಚಿಲ್ಪೇರಿಗಳೆಲ್ಲ ರಾಜಕೀಯಕ್ಕೆ ತಲೆಹಾಕದೆ ನಿಮ್ಮಷ್ಟಕ್ಕೆ ನೀವಿರ ಬಾರದೇನೋ (ಸ್ವಾಮಿಸ್ಮೃ. ೦೨೪). **ಚಿಲ್ಪಾರಿ:** ಆ ಚಿಲ್ಪಾರಿ ಬಹಳ ಚೇಷ್ಟೆ ಮಾಡುತ್ತಾನೆ (ರೂಢಿ). **ಚುಲ್ಪಾರಿ:** ಒಬ್ಬ ಚುಲ್ಪಾರಿಯನ್ನು ಎತ್ತಿ ಒಳಕ್ಕೆ ಬಿಡುತ್ತಿದ್ದವು (ಪರೀಕ್ಷೆ. ೩೨). [ <ಚಿಲ್ಪ ]

**ಚಿಲ್ಮಿಷ** (ನಾ). ಮೋಸ; ವಂಚನೆ: ಅವನೇನೋ ಒಳ್ಳೆಯವನೇ, ಅವನ ಹೆಂಡತಿ ಬಲು ಚಿಲ್ಮಿಷದವಳು (ಅದೂಟಿ. ೦೦೨).
[ ←ತೆಲು. ಚಿಲಿವಿಸ./ಸಂ. ಕಿಲ್ಬಿಷ ]

**ಚಿಲ್ಲ$_1$, ಚಲಿ$_1$, ಚಿಳ್ಳ, ಚಿಲ್ಲು$_1$** (ನಾ). ಒಂದು ಬಗೆಯ ಗಿಡ ಮತ್ತು ಅದರ ಬೀಜ; ಕತಕ. ಕದಡಿದ ನೀರನ್ನು ಶುದ್ಧಮಾಡಲು ಉಪಯೋಗಿಸುವ ಬೀಜ: ತದಕಿನ ತಾಳ ತೆಂಗಿನ ತಳಂಕಿನ ತುಂಬುರ ಚಿಲ್ಲ ಬೆಲ್ಲವತ್ತದ ಬಿಳಿಯತ್ತಿಯಿಪ್ಪೆಯ ಮರಂಗಳ (ಲೀಲಾವ. ೬-೨೬); ಚಿಲ್ಲ ಚೆನ್ನೆಗೆ ತೇಗು ತುಂಬುರವರಗಳಿಂ ನಿಲ್ಲದೆ ಮೆಟೆದುದಾ ವಿಪಿನ (ಕುಮಾ.ಹಾಂ. ೨೬-೩೩); ಚಿಲ್ಲ ನೆಲ್ಲಿಯು ಹೊಂಗೆ ವೇಟುಲು ... ಸೂರ ಮಾರ್ಗವ ತಡೆದಿಹುವು (ಕಂಸವಿ. ೦೮-೬೬). **ಚಲಿ$_1$:** (ಕ). **ಚಿಳ್ಳ:** ಚಳಿ ಬುಬ್ಬುಲು ... ಮೊದಲಾದ ಗಗನಮಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೫೪-೭).
**ಚಿಲ್ಲು$_1$:** "ಕತಕಂ ಚಿಲ್ಲು" (ಮುಂಗರಾ. ೪೨-೩೯); ಬೆಲ್ಲವತ್ತ ವರವಾದಲ ವಂಬಟೆ ಚಿಲ್ಲು ಚಿಳ್ಳಿಗಾಯ್ [ಪಾಠಾಂ. ಚಿಳ್ಳ ಚಿಲ್ಲಕಾಯ್] (ಸೂಕ್ತಿಸು. ೦೦-೮೭); (ಸಳಹಂ. ೪೬೨ ನೋ); ಮರಗಳು; ಹೆಸವ ... ಚಿಲ್ಲು, ಹೂವರಸಿ, ಬೆವ್ವಾಲೆ, ಹಾಲೆ (ಸಮ್ಮುಖ. ೨೩೬).
[ ದ್ರಾ.ಕ ತಮಿ. ತೆಲು. ಚಿಲ್ಲ ]

**ಚಿಲ್ಲ$_2$, ಚಿಲ್ಲು$_2$** (ನಾ). ರಾಟೆಯಲ್ಲಿ ಕದಿರನ್ನು ಜೋಡಿಸಲು ಇರುವ ಕಿವಿಯಂತಹ ಭಾಗ; ಕದಿರನ್ನು ಜೋಡಿಸುವ ಮರದ ಅಥವಾ ಚರ್ಮದ ಕಿವಿ: ಚಿಲ್ಲ ಹಮ್ಮಿಗಿ, ಕಟ್ಟಿ, ಇವೆಲ್ಲವನ್ನು ಮಾಡಿಸಿಕೊಡುತ್ತಾನೆ (ಕಪ್ಪಸು. I, ೩೬೬). **ಚಿಲ್ಲು$_2$:** ಮನಿಯಾನ ಕೋಣವ ಕಡಿಸಿ ಚಿಲ್ಲು ಮಾಡಿಸಿ ಕೊಟ್ಟಾ (ಹುಲ್ಲಗಿ. ೯೬).

**ಚಿಲ್ಲ$_3$** 'ಚುಲ್ಲ$_1$' ನೋ.

**ಚಿಲ್ಲ$_4$** (ನಾ). ೧. ರೋಗದಿಂದ ನೀರು ಸುರಿಯುತ್ತಿರುವ ಕಣ್ಣುಳ್ಳವನು; ಸೋರುಗಣ್ಣ. ೨. ಗುಂಡುಮುಳುಕನ ಹಕ್ಕಿ; ಮುಂಡುಮುಳುಕನ ಹಕ್ಕಿ: "ಆಟಾಪೀ, ಶಕುನೀ, ಚಿಲ್ಲಃ – ಈ ೩ ಗುಂಡುಮುಳುಕ (ನಹಕ್ಕಿ)" (ಹಲಾಯು. ೪೨-೯೬); "ಚಿಲ್ಲಮಾತಪಪಕ್ಷಿಯೆನೆ ಮುಂಡುಮುಳುಕನಕ್ಕುಂ" (ಮುಂಗರಾ ೫೦-೫). [ ಸಂ. ]

**ಚಿಲ್ಲಗೊಟ್ಟೆ** (ನಾ). =ಚಿಲ್ಲಬಿತ್ತು: ನೆಲ್ಲಿಯ ಸೆಟ್ಟು ಬಾಳಮಸಿತಾಂಜನವೊಳ್ಪಿಪ ವುಂಸ್ತ್ರಯಿಪ್ಪೆ ಕೇಡಿಲ್ಲದ ಚಿಲ್ಲಗೊಟ್ಟೆ ಪೊಸಪೀರೆಯ ಬಿತ್ತೆನೊಳಾದ ಬೂದಿಯುಂ ನಿಲ್ಲದೆ ಬಾವಿಯೊಳ್ ಕಲಸಲ್ ... ಬಾವಿಗಳ ನೀರಮ್ಮ ತೋಪಮಮಂ (ಅಟ್ಟಮ. ೦೦-೬೩). [ಚಿಲ್ಲ$_1$+ಗೊಟ್ಟೆ$_1$ (<ಕೊಟ್ಟೆ$_1$)]

**ಚಿಲ್ಲತನ** (ನಾ). ಕ್ಷುಲ್ಲಕತನ; ನೀಚತನ: ಚಿಲ್ಲವೇ ಹೇಳಕಟಯ್ಯನ್ನೀ ಚಿಲ್ಲತನವೆಂದಿಂಗೆ ಮಾಣ್ಬುದು (ಬಸಪು. ೪೫-೪೦).
[ ಚಿಲ್ಲ$_2$ (<ಚುಲ್ಲ$_1$) + – ತನ ]

**ಚಿಲ್ಲಫಲ** (ನಾ). =ಚಿಲ್ಲಬಿತ್ತು: ಚ(ಚಿ)[ಪಾಠಾಂ. ಛಿ]ಲ್ಲಫಲದಿಂದೆ ನೀರ್ಕದಡೆಲ್ಲಂ ತಿಳಿ (ಕಿಡು) ವಂತೆ ತಿಳಿಗುಮುದಟಿಂ ಧರೆಯೊಳ್ (ಜಸುದ. ೦೨-೪೬).
[ ಚಿಲ್ಲ$_1$ + ಫಲ ]

**ಚಿಲ್ಲಬಿತ್ತು** (ನಾ). ಚಿಲ್ಲದ ಬೀಜ: "ವಾರಿಪ್ರಸಾದನಃ–ಚಿಲ್ಲಬಿತ್ತು" (ಓಷಧಿ. ೦೫೨). [ ಚಿಲ್ಲ$_1$ + ಬಿತ್ತು$_2$ (<ಬಿಟ್ಟು) ]

**ಚಿಲ್ಲಬೀಜ** (ನಾ). =ಚಿಲ್ಲಬಿತ್ತು: "ಕಾಂಸ್ಯಂ-ಕಂಚು, ಚಿಲ್ಲಬೀಜ" (ಓಷಧಿ. ೫೪).
[ ಚಿಲ್ಲ$_1$ + ಬೀಜ ]

**ಚಿಲ್ಲರೆ** (ಗು). ೧. ಸಣ್ಣ; ಕ್ಷುದ್ರವಾದ; ಅಲ್ಪವಾದ; ಸಾಮಾನ್ಯವಾದ: ಎಲ್ಲಾ ದೇವರ ಗಂಡ ಅವ ಚಿಲ್ಲರೆ ದೈವದ ಮಿಂಡ (ಪುರಂದ. ೦-೩೬-೮); ಇತರೆ ಚಿಲ್ಲರೆ ಬಾಬುಗಳನ್ನೆಲ್ಲಾ ನಿರ್ವಹಿಸಬೇಕು (ಗ್ರಾಮಾಳ. ೨); "ಚಿಲ್ಲರೆ ಮಂದಿ" ಎಂದಳು ಇನ್ನೊಬ್ಬಳು (ವಾಪೋಲೀ. ೨೪೩). (ನಾ). ೨. ಒಂದು ಪೂರ್ಣ ನಾಣ್ಯದ ಅಂಶ,–ಭಾಗ; ಸಣ್ಣ ಪುಟ್ಟ ನಾಣ್ಯ: ಸಮಯಕೆ ದೊರೆಯುವ ರೂಪಾಯಿ ಚಿಲ್ಲರೆ ಸೂರರ ಚೆಕ್ಕಿಗೆ ಮಿಗಿಲು (ಜಂದ್ರವೀ. ೦೪೯-೯೩); ಎಂಟಾಣೆಯ ಪಾವಲಿಯೊಂದನ್ನಿತ್ತ ಅವನ ಕೈಗೆ, 'ಚಿಲ್ಲರೆ ಇಲ್ಲವಲ್ಲೋ' ಎಂದು (ರೂಪಸಂ. ೮).
**ಚಿಲ್ಲರೆಯಂಗಡಿ**=ನಿತ್ಯೋಪಯೋಗದ ವಸ್ತುಗಳನ್ನು ಸಣ್ಣ ಪ್ರಮಾಣದಲ್ಲಿ ಮಾರುವ ಅಂಗಡಿ; ಸಣ್ಣ ಅಂಗಡಿ; ಕಿರಂಕುಳ ಅಂಗಡಿ(ಉಕ): ನನ್ನ ತಮ್ಮ ಚಿಲ್ಲರೆಯಂಗಡಿ ಇಟ್ಟಿದ್ದಾನೆ (ರೂಢಿ). **ಚಿಲ್ಲರೆವ್ಯಾಪಾರಿ**= ನಿತ್ಯೋಪಯೋಗಿ ವಸ್ತುಗಳನ್ನು ಸಣ್ಣಪ್ರಮಾಣದಲ್ಲಿ ವ್ಯಾಪಾರ ಮಾಡುವವನು: ನಾನೊಬ್ಬ ಚಿಲ್ಲರೆ ವ್ಯಾಪಾರಿ (ಮೂರುದಾ. ೦೩೪).
[ ?./ತಮಿ. ಚಿಲ್ಲಱೈ; ಮಲ. ಚಿಲ್ಲಱ; ತುಳು. ಚಿಲ್ಲರೆ; ತೆಲು. ಚಿಲ್ಲರ./ಹಿಂ. ಚಿಲ್ಲರ್; ಮರಾ. ಚಿಲ್ಲರ್, ಚಿಲ್ಲಾರ್, ಚಿಲ್ಲೇರ್. / ಪ್ರಾ. ಛಿಲ್ಲರ ]

**ಚಿಲ್ಲರೆಕರ್ಚು** (ನಾ). (ಲೆಕ್ಕಕ್ಕೆ ಸಿಕ್ಕದ) ಸಣ್ಣಪುಟ್ಟ ವೆಚ್ಚ: ಚಿಲ್ಲರೆ ಕರ್ಚಿಗಾಗಿ ... ರೂಪಾಯಿಗಳನ್ನು ಕೊಡಲು ಕಾರ್ಯಕಾರಿಸಮಿತಿಯು ನಿರ್ಧರಿಸಿದೆ (ಹುಕುಮ. ೯೬). [ಚಿಲ್ಲರೆ + ಕರ್ಚು$_4$]

**ಚಿಲ್ಲರೆಕೆಲಸ** (ನಾ). ಮುಖ್ಯವಲ್ಲದ ಕೆಲಸ; ಸಣ್ಣಪುಟ್ಟ ಕೆಲಸ: ಚಿಲ್ಲರೆ ಕೆಲಸಕ್ಕೆ ಆಳು ಇಟ್ಟುಕೊಳ್ಳಲಾಗಿದೆ (ರೂಢಿ). [ ಚಿಲ್ಲರೆ + ಕೆಲಸ ]

**ಚಿಲ್ಲರೆಜನ** (ನಾ). ಸಣ್ಣಪುಟ್ಟ ಜನ; ಸಾಮಾನ್ಯ ಜನ: ಮಣ್ಣಿನ ಬಟ್ಟಲುಗಳಲ್ಲಿ ಮಿಠಾಯಿ ಕೊಡುತ್ತಾರೆ ಚಿಲ್ಲರೆಜನಕ್ಕೆ (ಸಾಹೇಬ್. ೩೮೦ ಅಡಿ). [ ಚಿಲ್ಲರೆ + ಜನ ]

**ಚಿಲ್ಲರೆಧಾನ್ಯ** (ನಾ). ಮುಖ್ಯವಲ್ಲದ ಕಾಳು ಕಡ್ಡಿ; ಹುರುಳಿ, ಅವರೆ ಮೊದಲಾದ ಧಾನ್ಯಗಳು; ಅಕ್ಕಡಿಕಾಳು: ವರ್ಷಕ್ಕೆ ಒಂದೆರಡು ಪಲ್ಲ ಚಿಲ್ಲರೆಧಾನ್ಯವೂ ಬರುವುದುಂಟು (ರೂಢಿ). [ ಚಿಲ್ಲರೆ + ಧಾನ್ಯ ]

**ಚಿಲ್ಲರೆಮಾತು** (ನಾ). ಅಪ್ರಧಾನವಾದ ಮಾತು; ಸಣ್ಣಪುಟ್ಟ ಮಾತು: ಸುಮ್ಮನೆ ಯಾಕಯ್ಯಾ ಈ ಚಿಲ್ಲರೆಮಾತನ್ನೆಲ್ಲಾ ಕಟ್ಟಿಕೊಂಡು ಕುಣಿಯುವುದು (ರೂಢಿ). [ ಚಿಲ್ಲರೆ + ಮಾತು$_1$ ]

**ಚಿಲ್ಲರೆವೆಚ್ಚ** (ನಾ). = ಚಿಲ್ಲರೆಕರ್ಚು: "ಚಿಲ್ಲರೆ ವೆಚ್ಚ; ಸಾದಿಲ್ವಾರು" (Contingency. ಪತ್ರಿವಿ. ೨೪). [ ಚಿಲ್ಲರೆ + ವೆಚ್ಚ ]

**ಚಿಲ್ಲರೆಸಾಮಾನು**(ನಾ). ಸಣ್ಣಪುಟ್ಟ ಸಾಮಾನು: ಈ ಚಿಲ್ಲರೆ ಸಾಮಾನುಗಳಿಗೆ ಸಂಬಳದಲ್ಲಿ ಅರ್ಧ ಖರ್ಚಾಗುತ್ತದೆ (ರೂಧ). [ ಚಿಲ್ಲರೆ + ಸಾಮಾನು ]

**ಚಿಲ್ಲಹರಿ** (ನಾ). ಜ್ಞಾನಪ್ರವಾಹ,–ಪರಂಪರೆ; ಚಿದ್ಭಾವತರಂಗ: ಪರವಶೀಭಾವದಿಂದರೆವಿರಿದ ಕಣ್ಗಳಿಂ ಪರಮ ಚಿಲ್ಲಹರಿ ತಲೆಗೇರಿದುನ್ಮತ್ತದಿಂ ಯೋಗೀಂದ್ರರುರೆ ಮೆರೆದರು (ಬಕೋಪು. ೪–೩೫).

[ ಸಂ. (ಚಿತ್ + ಲಹರಿ) ]

**ಚಿಲ್ಲಳಿ** 'ಚಿಲ್ಲೆಳಿ' ನೋ.

**ಚಿಲ್ಲಾಣ** (ನಾ). ೧. ಸಣ್ಣಕತ್ತಿ; ಕಠಾರಿ. ೨. ಬಳುಕುವ ಕತ್ತಿ: (+) 'ಚೀಲಣ' ಪರಾ. [ ←ತೆಲು. ಚಿಲ್ಲಾಣ, ಚಿಲ್ಲಾಡ ]

**ಚಿಲ್ಲಿಕ** (ನಾ). ಒಂದು ಬಗೆಯ ಸಸ್ಯ: "ಶ್ವಾಸನಃ – ಚಿಲ್ಲಿಕ, ನಾಯ ಚಿಲಕೆ" (ಒಷಧ. ೧೬೪). [ <ಚಿಲಿಕೆ$_1$ ? ]

**ಚಿಲ್ಲು$_1$** 'ಚಿಲ್ಲ$_1$' ನೋ.

**ಚಿಲ್ಲು$_2$** 'ಚಿಲ್ಲ$_2$' ನೋ.

**ಚಿಲ್ಲು$_3$** (ನಾ). ಬಂದೂಕಿನಿಂದ ಹೊಡೆದಾಗ ಹಾರುವ ಗುಂಡು; ಚರೆ: ಕಾಲಿಗೆ ಗುಂಡು ತಾಗಿ ಇಬ್ಬರು ಉರುಳಿದರು. ಒಂದು ಚಿಲ್ಲು ಬಂದು ನನ್ನ ತೊಡೆಯನ್ನು ಕೊರೆಯಿತು (ಧೂಮಮ. ೯೦). [ ? ]

**ಚಿಲ್ಲುಕಭಟಾರ** (ನಾ). ಒಬ್ಬಾತನ ಹೆಸರು: ಉತ್ತರಾಯಣ ಸಂಕ್ರಾಂತಿಯೊಳ್ವಕ್ಕಾಣಭಟಾರರ ಶಿಷ್ಯರ್ ಚಿಲ್ಲುಕಭಟಾರರ ಕಾಲಂ ಕರ್ಚಿ ಕೊಟ್ಟ ಮರ್ಯಾದೆಯೊಳಗೆ (ಎಕ. XII, ಶಿರಾ. ೩೮–೪೧; 943).

[ ಚಿಲ್ಲುಕ$_0$ + ಭಟಾರ ]

**ಚಿಲ್ಲುಗುಂಡು**(ನಾ). ಬಂದೂಕಿನಿಂದ ಸಿಡಿಯುವ ಗುಂಡು; ಸಿಡಿಗುಂಡು: ಎರಡೆರಡು ಚಿಲ್ಲುಗುಂಡು ಗುರಿ ಇಡಿಸಿದಲ್ಲಿ ಚನ್ನುವೀರ, ಅಕ್ಕಸಾಲಿ ನರಜು, ಇವರಿಬ್ಬರೂ ಗುರಿಗೆ ಇಟ್ಟದ್ದು ತಗಲಿತು (ರಾಜೇಂದ್ರ. ೮೪೩).

[ ಚಿಲ್ಲು$_3$ + ಗುಂಡು ]

**ಚಿಳ್ಳೆ, ಚಿಳ್ಳೆ$_2$** (ನಾ). ನೀಚಳಾದ ಹೆಂಗಸು; ಕೆಟ್ಟ ನಡತೆಯುಳ್ಳವಳು: ಕುಟಿತಮತಿಗಳು ಖುಲ್ಲೆಯರು ಕಳ್ಳೆಯರು ಚಿಲ್ಲೆ[ಪಾಠಾಂ. ಳ್ಳೆ]ಯರು (ಬಸಪು. ೪೬–೫೪). **ಚಿಳ್ಳೆ$_2$**: ಕಳ್ಳೆಯರ್ ಚಿಳ್ಳೆಯರ್ ಶಾಂತರೂ ಯೆಣಿಸದಪರಾಧೆಯರ್ (ಚತಿಲ. ೨–೫೮). [ ಚಿಲ್ಲ$_3$ (< ಚುಲ್ಲ$_1$) + – ಎ$_2$ ]

**ಚಿಲ್ಲೆಳಿ, ಚಿಲ್ಲಳಿ** (ನಾ). ಒಂದು ಬಗೆಯ ಮರ: ಒಕ್ಕುಳಮುಪ್ಪ ಚಿಲ್ಲೆಳೆಯ [ಪಾಠಾಂ. ಚಿಲ್ಲಳೆಯ, ಚಿಲ್ಲೆಳೆಯ, ಚಿಳ್ಳಲೆಯ]ಕಾಯ್ಗಳೊಳಿಕ್ಕಿ ಸುರೇಂದ್ರ ಶಾಖೆಯುಂ ಚಕ್ಕನೆ ಕೂಡಿರಲ್ (ಖಮದ. ೬–೫೬). **ಚಿಲ್ಲಳಿ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಿವ** 'ಸಿವ' ನೋ.

**ಚಿವಟು** 'ಚಿವುಂಟು' ನೋ.

**ಚಿವಡಾ, ಚಿವುಡಾ, ಚುಡುವ, ಚೂಡಾ** (ನಾ). ಹುರಿದು, ಒಗ್ಗರಣೆ ಹಾಕಿದ ಅವಲಕ್ಕಿ; ಕಾರದ ಅವಲಕ್ಕಿ: ಹೊರಗೆ ಒಬ್ಬ 'ಮಹಾರಾಜರು' ಚಹಾದ ತಪ್ಪೇಲಿಯನ್ನೂ, ಚಿವಡಾದ ರಾಶಿಯನ್ನೂ ಇಟ್ಟುಕೊಂಡು ಕುಳಿತು, ಶಿಷ್ಯರಾಗಬಂದ ಉಮೇದುವಾರರಿಗೆ ಅನುಗ್ರಹಿಸುತ್ತಿದ್ದರು (ಪೂರ್ವರಂ. ೩). **ಚಿವುಡಾ**: (ಚಿವುಡಾ) ಕಾರದ ಅವಲಕ್ಕಿ ಇವೆಲ್ಲ ನಾಜೂಕ ಆಹಾರದಲ್ಲಿ ಬರುವವು (ಬೃಹಜೀ. ೧೩೨). **ಚುಡುವ**: ಚಹ ಚುಡುವ ಭಕ್ಷಣವು ಗೃಹಸ್ತನ ಲಕ್ಷಣವು (ಶಿಭ್ರಮ. ೩೦). **ಚೂಡಾ**: ಚಹಾದ ಜೋಡಿ ಚೂಡಾಥಾಂಗ ನೀ ನನಗಂದಾಂವಾ (ಸಖೀಗೀ. ೯೨–೧೫); ಅಲ್ಲಿಯ ಕೆಲಸಗಾರರು ಉಪ್ಪಿಟ್ಟು, ದೋಸೆ, ಸಿರಾ, ಇಡ್ಲಿ, ಚೂಡಾ ಮುಖಾಂತರ ತಮ್ಮ ನಿತ್ಯದ ನಾಮಾವಳಿಯ ಪಠಣಕ್ಕಾರಂಭಿಸಿರುವರು (ತುಳ್ಳುಣ್ಣ. ೮). [ ←ಮರಾ. ಚಿವಡಾ. /ಪ್ರಾ. ಚಿಮಿಟ್ಟ, ಚಿಮಿಢ, ಚಿಮಿಟ್ಟ, ಚಿವಿಡ./ಸಂ. ಚಿಪಿಟ, ಚಿಪುಟ ]

**ಚಿವರು$_1$** 'ಸಿವುಡು$_1$' ನೋ.

**ಚಿವರು$_2$** 'ಸಿವುಡು$_2$' ನೋ.

**ಚಿವರುಗಾಯ** 'ಚಿವುರುಗಾಯ' ನೋ.

**ಚಿವಲ್ಲಿಕೆ** (ನಾ). ಒಂದು ಬಗೆಯ ವನಸ್ಪತಿ: "ಉಚ್ಚಲ್ಲಿಕಾ–ಚಿವಲ್ಲಿಕೆ ?" (ಒಷಧ. ೧೬). [ ? ]

**ಚಿವಾನಿಕಳನಿ** 'ಚಿವಾನಿಕಟನಿ' ನೋ.

**ಚಿವಾನಿಕಟನಿ, ಚಿವಾನಿಕಳನಿ**(ನಾ). ಒಂದು ಗದ್ದೆಯ ಹೆಸರು: ವಾಳ್ಗಟ್ಟು ಚಿವಾನಿಕಟನಿ (ಎಕ. XVI, ತುಮಕೂ. ೯೯–೬; ?). **ಚಿವಾನಿಕಳನಿ**: ಇದರ್ಕೆ ಚಿವಾನಿಕಳನಿ ವಾಳ್ಗಟ್ಟುಕೊಟ್ಟೊದು (ಎಕ. XVI, ತುಮಕೂ, ೮೬–೫; ?).

[ ಚಿವಾನಿ$_0$ + ಕಟನಿ ]

**ಚಿವಿ** (ಕ್ರಿ). ಕೆರೆದುಕೊಳ್ಳು; ತುರಿಸು: "ಕೆರೆ, ತುರಿಸು, ತಿಕ್ಕು, ಚಿವಿ, ಚಿವುಟು, ಚಿವುರು, ಚಿಗಟು" (ಕಂನುಹು. ೮೩). [ ? ]

**ಚಿವಿಕೆ** (ನಾ). ಒಂದು ಬಗೆಯ ಗಿಡ; "ಗ್ರಂಥಿಲಾಮಾರಿಷ" (ಪಂಡಿತ).

[ ? ]

**ಚಿವು** (ನಾ). ಒಂದು ಅನುಕರಣ ಧ್ವನಿ; ಹಕ್ಕಿಗಳ ಚಿಲಿಪಿಲಿ: 'ಚಿವುಗುಂಡು' ಪರಾ.

**ಚಿವುಚಿವು** (ದ್ವಿರುಕ್ತಿ): ಹೂವಿನ ಗಿಡದ ಸಾಲೊಳಗೆ ಚಿವುಚಿವು ಅನ್ನುತ್ತ . . . ಹಾರಾಡುವ ಹಕ್ಕಿ ನೋಡು (ಮುಂಬಯಿ. ೨–೧೧).

**ಚಿವುಂಟು, ಚಿಗುಂಟು, ಚಿಮುಟು. ಚಿವಟು, ಚಿವುಟು$_2$, ಚಿವುಡು, ಚೂಟು$_1$, ಜಿಗಟು$_1$, ಜಿಗುಟು$_1$** (ಕ್ರಿ). ೧. ಉಗುರುಗಳಿಂದ ಚರ್ಮವನ್ನು ಹಿಂಡು,–ಅದುಮು,–ಒತ್ತು: ಕೂಸಂ ಚಿವುಂಟುವ್ಯೆ ತೊಟ್ಟಿಲಂ ತೂಗುವ್ಯೆ (ನಂಬಿರ. ೧೫–೧೪೧). ೨. ಉಗುರಿನಿಂದ ಕತ್ತರಿಸು,–ಕೀಳು: ಕಾಲಕಂಧರ ಬೊಮ್ಮನೇಕಶಿರಸ್ಸನಾ ನಖರಾಗ್ರದಿಂ ಸಾಲೊಳೊಂದನದಂ ಚಿವುಂಟಲಜಂ ತದಾಮೃತನಾದನೇ (ಹಾಲಾಸ್ಯ. ೨–೧೬–೫). **ಚಿಗುಟು**: ಚಿಗುಟುವುದು, ಕಾರಣವಿಲ್ಲದೆ ಕೆಣಕಿ ಜಗಳಕ್ಕೆ ಕರೆಯುವುದು (ಕಳಹು.೦೦). **ಚಿಮುಟು**: ೧. ಅವನ ತೋಳನ್ನು ಗಟ್ಟಿಯಾಗಿ ಚಿಮುಟಿ . . . ಎಂದ (ದೀವಹಿಂ. ೧೪೩). **ಚಿವಟು**: ೧. ಚಿವಟುವುದೂ, ಚಿವರುವುದೂ ನಡೆಯಿತು (ಕುರಿಹಿಂ. ೭೭). **ಚಿವುಟು$_2$**: ೧. ಸವರಣಂ ತಲೆಗಳನರಿದು ವೈಷ್ಣವರ ಘೋಣಾಗ್ರಂಗಳಂ ಮಿಗೆ ಚಿವುಟ ಬೌದ್ಧರುಗಳ ಮದೋದ್ಧತಿಯೆಂಬ ಕಾನನನೆ ಸವಟ್ (ಬಸಪು. ೫೨–೦೦); ಶೈಲೆ . . . ಮಮತೆಯಿಂದ ಕೆನ್ನೆಗೆ ಮೆಲ್ಲನೆ ಚಿವುಟಿ, ಅಲ್ಲಿಂದ ಪಾರಾಗಿ ಸ್ನಾನಕ್ಕಾಗಿ ಹೊರಟು ಹೋದಳು (ಕಾಕೋಡ. ೧೬); ಅವನ ಹೃದಯದಲ್ಲಿ ಚಿಂತೆಯು ಚಿವುಟಿದಂತಾಗುತ್ತಿದ್ದಿತು (ಪ್ರಣಸ. ೭೧). ೨. ರಾಕ್ಷಸರ ಹುಡುಗರು . . . ಚಿಗುರುಗಳಂ ಚಿವುಟಿ (ಸೌಗಂಧಿ. ೪೧೯–೯); ಕರುಳುವಳ್ಳಿಯ ಕುಡಿಯ ಚಿವುಟಿ ಸೊನೆಗರಸುತಿಹೆ ಇಂಥ ಹಾಲುಳ್ಳ ಹಾಡು (ಅರಳು, ೩೫೯–೦೧). **ಚಿವುಡು**: ೨. "ಚಿವುಡು–ನಖಚ್ಛೇದೇ" (ಶಮಧಾ). **ಚೂಟು$_1$**: ೧. "ನಮ್ಮನ್ನು ಚೂಟಿದರೆ ನಮಗೆ ನೋವಾಗುತ್ತದೆ; ಅದರಂತೆ ಪರರಿಗೆ" ಎಂಬ ಮಾತನ್ನು ನಾವು ಮನಸ್ಸಿನಲ್ಲಿಡಬೇಕು (ಭಾರಸಂ. ೨). **ಜಿಗಟು$_1$**: ೧. ಅಮ್ಮ, ನೋಡಮ್ಮ ಇವಳನ್ನ! ಜಿಗಟತಾಳೆ (ಹಳಜೀ. ೧೭೯). **ಜಿಗುಟು$_1$**: ೧. ಅವನ ತೋಳಿನ ಚರ್ಮ ಎದ್ದು ಬರುವಂತೆ ಜಿಗುಟುತ್ತಿದ್ದರು (ಮುಸಕೂ. ೧೩). ೨. ಶೂಲಿ ತಾ ಮಗನ ತಲೆ ಜಿಗುಟಿ ಹರಿಯೇಕೆ ಪಾಲಿಸದೆ ಹೋದ (ಸರ್ವಜ್ಞ. ೨೧೫). [ ದೇ.॥ ತಮಿ. ಚಿಮಿಣ್ಣು; ಮಲ. ಚೇಣ್ಣು ]

**ಚಿವುಕಳಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಭ್ರಮಣದಲ್ಲಿ ಹಿಮ್ಮಡಿಗಳಿಂದ ಒಂದು ಬಾರಿ ಯರಡು ಪಥಳವ ತಾಡಿಸುವುದು. ಅವುದು ಉಂಟು ಅದು ಬಲ್ಲವರಿಂದ ಚಿವುಕಳಿ ಎಂದು ನುಡಿಯಲ್ಪಡುವುದು (ಖಡ್ಗಟೀ. ೪–೩೦).

[ ? ]

**ಚಿವುಕುಲಿ** 'ಚಿನುಕುಲಿ' ನೋ.

**ಚಿವುಗಣ್ಣು** (ನಾ). ೧. ಅರೆಗಣ್ಣು ; ಕಿರುಗಣ್ಣು : ಆವನ ಆ ಚಿವುಗಣ್ಣುಗಳು ಅಗಲವಾದುವು (ಚೀನಬು. ೨೩೨). ೨. ಸಣ್ಣದಾಗಿಸಿದ ಕಣ್ಣು : ದೂರದಲ್ಲಿ ಬರುತ್ತಿದ್ದ ಬಸ್ಸನ್ನು ಚಿವುಗಣ್ಣಿನಿಂದ ನೋಡಿದಳು (ರೂಢಿ).
[ ಚಿವು₀ + ಕಣ್ಣು₂ (<ಕಣ್) ]

**ಚಿವುಗುಡು** (ಕ್ರಿ). ಚಿವುಚಿವು ಎಂದು ಧ್ವನಿಮಾಡು ; ಚಿಲಿಪಿಲಿಗುಟ್ಟು : ಕಣ್ಣು ಮುಚ್ಚಿಕೊಳ್ಳುತಾವು ಚಿಕ್ಕ ಚಿವುಗುಡುತಾವ ಹಕ್ಕಿ (ಹಾಡುಪಾ. ೪೧-೩).
[ ಚಿವು + ಕುಡು₁ (<ಕೊಡು₁) ]

**ಚಿವುಟು₁** 'ಚಿವಂಟು' ನೋ.

**ಚಿವುಟು₂** 'ಚಿವುಂಟು' ನೋ.

**ಚಿವುಡಾ** 'ಚಿವಡಾ' ನೋ.

**ಚಿವುಡಿಕೆ** (ನಾ). ಜಿಗುಟಿ ಹಾಕುವಿಕೆ ; ಉಗುರಿನಿಂದ ಕತ್ತರಿಸುವಿಕೆ : ಪೊಡಮಡಿಕೆ, ತಲೆವಡಿಚಿವುಕೆ, ಡಿಕೆ (ಶಬ್ದಾನು. ೫೭೦ ಪ್ರಯೋ).
[ ಚಿವುಡು (<ಚಿವುಂಟು) + – ಇಕೆ ]

**ಚಿವುಡು** 'ಚಿವುಂಟು' ನೋ.

**ಚಿವುರು₁** 'ಸಿವುಱು₁' ನೋ.

**ಚಿವುರು₂** 'ಸಿವುಱು₂' ನೋ.

**ಚಿವುರುಗಾಯ, ಚಿವರುಗಾಯ** (ನಾ). ಉಗುರು ಮುಳ್ಳು ಮೊದಲಾದುವುಗಳಿಂದಾದ ಗಾಯ ; ಪರಚುವುದರಿಂದಾದ ಗಾಯ : ಗಲ್ಲದ ಮೇಲೆ ಚಿವುರುಗಾಯದ ಕಲೆಗಳಿದ್ದವು (ನಿರಾಳ. ೬೦). **ಚಿವರುಗಾಯ:** ನನಗೆ ಚಿವರುಗಾಯಗಳಾಗಿದ್ದವು (ಮೋದಿಮ. ೨೦೪)
[ ಚಿವುರು₁ (<ಸಿವುಱು₁) + ಗಾಯ ]

**ಚಿವ್ವು** 'ಚೀವು' ನೋ.

**ಚಿಹಣ, ಜೇಹಣ** (ನಾ). ಮೇಳಗಾತಿ (?): ೧೧ಗಗಳೋದುಗ್ಗಡಣೆ ಕೋಕಿಲರವಂ ಕಹಳೆ ಘಳವಿಡಿದ ಪಲಸು ಮದ್ದಳೆ[ಯು] ಮೊರೆವಳಕುಲಂ ಬಳಸಿ ತಾರ್ರೈಪ ಚಿಹಣಿ[ಪಾಠಾಂ. ಚಹಣಿ, ಚಿಂಹಣತೆ, ಚಿಹಣಿ]ಯರು . . . ನವಿಲು ನರ್ತನಂಗೈವವಂತಾ ವನದೊಳು (ಸೋಮಚ. ೨-೮೦); (ಹಡಪ. ೩-೩೬ ಸೋ); "ಹಿವ್ನೀಳ" (ಸೋಮಚ. ಕೋಶ). **ಜೇಹಣ:** ಲಲ್ಲೆಗೂಡುವ ಜೇಹಣಿಯ[ಪಾಠಾಂ. ಜೇವಣಿಗೆಯರ] ಸಂಗೀತದ ಸಂದಣಿಯೊಳ್ ಪುಷ್ಪಾಂಜಲಿಯ ಸಮಯದೊಳ್ (ಮಲುಕ. ಹ. ೦೬೯-೦೦). [ ? ]

**ಚಿಹ್ನ** (ನಾ). ಗುರುತು ; ಲಕ್ಷಣ ; ಲಾಂಛನ : ಎಸೆದೊಪ್ಪಿದರ್ ವಿಮಾನಮಾಲೆ ಖಚರಾನೀಕಕ್ಕೆ ಚಿಹ್ನಂಗಳ್ (ಶಾಂತಿಪು. ೫-೩೪); ಗುರುಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನ (ಬಸವ. ೯೨೮); ಮಹೋತ್ಪಳೋತ್ಪಳನಿಮೇಷೋನ್ಮೇಷ ಚಿಹ್ನಂಗಳಿಂ ಗಡ ಬೆಳ್ದಿಂಗಳಿದೆಂಬುದೇ ಪೊಗಟ್ವೆನೂರ್ಜಶ್ರೀಯು ಬೆಳ್ದಿಂಗಳಂ (ಜಗವಿ. ೮-೭೪). [ ಸಂ. ]

**ಚಿಹ್ನೆ** (ನಾ). = ಚಿಹ್ನ : ಇತರರಿಂದ ಅವನನ್ನು ಪ್ರತ್ಯೇಕಿಸುವ ಚಿಹ್ನೆಗಳೂ ಹೌದು (ಅತಿನ್ನಕು. ೬೨೫). [ ಸಂ. ಚಿಹ್ನ ]

**ಚಿಳಕ** (ನಾ). ಸಮೂಹ ; ಮಂಡಲ (?) : ಇಳೆಯಿಂತೀರೇಳು ಲೋಕಂಗಳೊಳವತಿಶಯಂ ಚೆಲ್ವಿನಿಂ . . . ಕುಳಾದ್ರೀಂದ್ರದಿಂದಂ ಬಳಸಿರ್ದಾ ಮೇರುವೇಳುಂ ಗ್ರಹದ ಚಿಳಕವೇಳುಂ ಯತಿಖ್ಯಾತಿಯೇಳುಂ . . . ತಂನೊಳೊಪ್ಪಲು (ಕಶಿ. IV, ೦-೮ ; 1204). [ ? ]

**ಚಿಳಿಚಿಟಿಲ್** (ನಾ). ಒಂದಂ ಅನುಕರಣ ಶಬ್ದ : ಅಗಸಿಖರಂ ಚಿಳಿಚಿಟಲೆನೆ [ಪಾಠಾಂ. ಛಿಳಿಛಿಟಿಲೆನೆ]ಮಿಗೆ ಸಿಡಿದುದು (ರಾಜಶೇ. ೫-೩೬).

**ಚಿಳಿಚಿಮ** 'ಚಿಲಿಚಿಮ' ನೋ.

**ಚಿಳಿಚಿಳಿ** (ನಾ). ಒಂದು ಅನುಕರಣ ಶಬ್ದ : ಚಿಳಿಚಿಳಿ [ಪಾಠಾಂ. ಛಿಳಿಛಿಳಿ] ಧ್ವನಿ ಛಟಛಟತ್ಕೃತಿ ಘುಳುಘುಳುಸ್ವನ (ತೊರರಾ. ೫-೮-೬೩)

**ಚಿಳಿಲ್** (ನಾ). ಒಂದಂ ಅನುಕರಣ ಶಬ್ದ : ಬೀಸೂವ ಬಿಱುಗಾಳಿ ಕೋಳ್ಮಿಂ ಮುಟ್ ಪೊಯ್ಯ ಸಿಡಿಲ್ ಚಿಳಿಲೆಂಬ ಮಿಂಚು (ಪಂಪಭಾ. ೧೮೩ ಪ್ರಯೋ).

**ಚಿಳಿಬರಸು** (ನಾ). ಒಬ್ಬಾತನ ಹೆಸರು(?): ಸಿವನಂದ ರಾಚನ ಮಗನಣುಗನ್ ಚಿಳಿಬರಸು ಮಾಡಿಸಿದೊನ್ (ಸೌಇಇ. IX-1, ೨೨-೦೪ ; 923).
[ ? + ಅರಸು₂ (<ಅರಸ₁) ]

**ಚಿಳ್ಕೀಳ್** (ನಾ). ಒಂದು ಅನುಕರಣ ಶಬ್ದ : ಪಂದಳೆಗಳನೆರ್ದೆಯಂ ಮೆಟ್ಟಿ ಚಿಳ್ಕೀಳೆನಲ್ ಬೆಟ್ಟುಱುವನ್ನಂ ಕಿಟ್ಟು ಕಿಟ್ಟಿಪ್ಪಳಿಸಿ (ಶೃಂಗಾರ. ೧-೬೧).

**ಚಿಳ್ಳ₁** 'ಚುಲ್ಲ₁' ನೋ.

**ಚಿಳ್ಳನೆ**(ಅ). ತಟ್ಟನೆ; ಕೂಡಲೆ: ಉಗುರೊತ್ತಲು ನೀರಿನ ಸೆಲೆ ಚಿಳ್ಳನೆ ಪೊಳ್ಲ್ ಚಿಮ್ಮುವ ಸಿರಿನೆಲವೆ (ಹೂಹಾದಿ. ೫೦-೧೧).
[ ಚಿಳ್ಳು₀ + – ಅನೆ₁ ]

**ಚಿಳ್ಳು** (ನಾ). ಒಂದು ಬಗೆಯ ಮರ : " ಕೋವಿದಾರಃ – ಕಂಚಿವಾಳ, ಚಿಳ್ಳು, ಹೇರಾಚ ?" (ಓಷಧಿ. ೪೧). [ ? ]

**ಚಿಳ್ಳೆ₁** 'ಚಿನ್ನಿ₁' ನೋ.

**ಚಿಳ್ಳೆ₂** 'ಚಿಲ್ಲೆ' ನೋ.

**ಚಿಳ್ಳೆ₃** (ನಾ). ಸಣ್ಣದಂ; ಪುಟ್ಟದು; ಮರಿ : "ಕರು, ಕುನ್ನಿ, ಪೂಳಿ, ಚಿಳ್ಳೆ, ಚ್ಯಾ, ಪಿಳ್ಳೆ, ಕಂದ . . . ಹುಡುಗ" (ಕಂನುಹು. ೮೧). **ಚಿಳ್ಳೆಪಿಳ್ಳೆ = ಚಿಳ್ಳೆ₃** : ಎಲ್ಲರ ಮನೇಲೂ ಚಿಳ್ಳೆಪಿಳ್ಳೆಗಳೇ ಇರೋದು (ಮೂರ೮. ೯೮). [ ? ]

**ಚಿಳ್ಳೆಕೇತ** (ನಾ). ಕೀಟಲೆಮಾಡುವ ಒಂದು ಬಗೆಯ ಬೆಂತರ,–ಅತಿಮಾನುಷವ್ಯಕ್ತಿ : Robin good fellow ಎಂಬ ಚಿಳ್ಳೆಯಕ್ಷ, ಚಿಳ್ಳೆಕೇತ (Puck. ೫೦೪೩). 'ಕಿಳ್ಳೆಕೇತ' ಪರಾ. [ ಚಿಳ್ಳೆ₃ + ಕೇತ₂ ]

**ಚಿಳ್ಳೆಪಿಳ್ಳೆರಾಯ** 'ಚಿಲ್ಲೆಪಿಳ್ಳೆರಾಯ' ನೋ.

**ಚಿಱಿಯಪೊಟಲು** (ನಾ). ಒಂದು ಊರಿನ ಹೆಸರು : ಚಿಱುಪಿಯು ಚಿಸ್ತ ಕುಚ್ಚಿಯು ಚಿಱಿಯಪೊಟಲು ಪುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆಯೊಡ್ಡಿನ ಕಟಗೆ (ಸೌಇಇ. IX-1, ೨೬-೦೦ ; 950).
[ ಚಿಱ₀ + ಪೊಟಲು (<ಪೊಟಲ್) ]

**ಚಿಱು, ಚಿರು** (ನಾ). ಕಿಱಿದು ಎಂಬುದಕ್ಕೆ ಸಮಾಸದಲ್ಲಿ ಬರುವ ಸಂಕ್ಷಿಪ್ತರೂಪ: ಚಿಱುನನೆ ಚಿಲ್ಲರಳ್ದ ಕಳಿವೂಪಳೆವೂ . . . ಕೀಡೆ ಕರ್ದುಂಕಿದಪೂ(ಶ್ರೀಪುವಿ. ೪೨-೬). 'ಚಿಱುಗುಳ್ಳ' ಪರಾ. **ಚಿರು:** 'ಚಿರುಗುಳ್ಳ' ಪರಾ. [ <ಕಿಱು₂ ]

**ಚಿಱುಗುಳ್ಳ, ಚಿರುಗುಳ್ಳ** (ನಾ). ಒಂದು ಬಗೆಯ ಮರ : ಇಪ್ಪೆವಕುಳಂ ಕರಿಯವೀಳೆ ಚಿಱುಗುಳ್ಳಂ . . . ಮೊದಲಾದುತ್ಕೃಷ್ಟ ತರುಸಂತತಿಗಳಿಂದೆಸೆವುದುಚ್ಚಳಿತ ನಿರ್ಝರ ವಿಪುಂಜತತಿ ರಂಜಿಸುವ ಬಿಂಜಂ (ಉದ್ಭಟ. ೨-೪೨). **ಚಿರುಗುಳ್ಳ :** "ನಿದಿಗ್ದಿಕಾ, ಸ್ಪೃಶ್ರೀ . . . ರಾಷ್ಟ್ರಿಕಾ–೧೦ ಹೆಗ್ಗುಳ್ಳದ ಹೆಸರುಗಳು ಮುಳ್ಳುಳ್ಳ ಚಿರುಗುಳ್ಳ" (ಸಿದ್ಧಾಂಶಿ. ೦೧೬).
[ ಚಿಱು + ಗುಳ್ಳ ? ]

**ಚಿಱುಬಾಳೆ** (ನಾ). ಒಂದು ಬಗೆಯ ಬಾಳೆ : ನಂದನಾದ್ಯಾರಾಮಂಗಳೊಳು . . . ಚಿಱುಬಾಳೆ . . . ಸಾರ್ವರ್ತುಕಮಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೦). [ ಚಿಱು + ಬಾಳೆ₁(<ಬಾೞೆ) ]

**ಚಿಱುವೇರು, ಚಿರುವೇರು** (ನಾ). ಕೆಂಪುಬಣ್ಣವನ್ನು ಒದಗಿಸಿಕೊಡುವ ಒಂದು ಬಗೆಯ ಬೇರು,–ಮೂಲಿಕೆ : ಚಿಱುವೇರಿನ ಬಣ್ಣಂ ಮಿಗೆ ಪಱಿಯಲ್ಕಂಬರವ ಬಿಡದುಮಾ ತೆಱದಿಂದ ಕಾಂ ಕುಱುಗಿರ್ಪ ನೇಹವಾತನು ಮಱುವನ್ನಂ ಬಿಡದು ಮೈದೊಱದುಮಾಯಾಸಂ (ಕವಿಜಿ. ೪-೨೪). **ಚಿರುವೇಱು :** ಚಿರುವೇರು, ಛಾಯಾವೇರು (ಪ್ರಮಿಶಿ. ೫೬-೦೦೫೫). 'ಚಾಯಬೇರು' ಪರಾ. [ ←ತೆಲು. ಚಿಱುವೇರು, ಚಿರುವೇರು ]

**ಚಟೀಯು** (ನಾ). ಒಬ್ಬಾತನ ಹೆಸರು : ಮಾರಾನ್ತ ರಿಪುಬಲದೊಳ್ಕಾಗಿ × × × ಱಿದು ಸಗ್ಗಸ್ಸನಾದಂ ಚಟೀಯಂ (ಎಳ. X, ಮುಳಬಾ. ೮೩–೩; ಸು. 767 ?). [ ? ]

**ಚೀಕಟಕಿ** (ನಾ). ಒಂದು ಬಗೆಯ ಗಿಡ : ವಿರೇಕಕ್ಕೆ:–ನುಗ್ಗೆಯ ಸೊಪ್ಪು, ಹರುವೆ ಸೊಪ್ಪು . . . ಚೀಕಟಕಿ, ತ್ರಿಫಲೆ ಇವು ಪ್ರತ್ಯೇಕವು ಒಂದೊಂದು ತೊಕ (ವಿಶ್ವವಿ. ೧೭೩). [ ? ]

**ಚೀಕರಿ** 'ಸೀಕರಿ' ನೋ.

**ಚೀಕರಿವೋಗು** 'ಸೀಕರಿವೋಗು' ನೋ.

**ಚೀಕಲು** 'ಸೀಕಲು' ನೋ.

**ಚೀಕಾತು** (ನಾ). ಅಜಿಗಿಜಿಯಾದಂದಂ; ವುಾದ್ದೆ: ತುಳಿದರು ಕೀರಿದರು ಕೆಡಹಿದರು ಸತ್ವದಿ ಚೀರಿದರು ಚೀಕಾತು ಮಾಡಿದರರ್ಧನಿಮಿಷದಲಿ (ಕೋಗೆಯು. ೩೩–೪೮). [ ←ಹಿಂ. ಮರಾ. ಚಿಕಾಟ್ ]

**ಚೀಕು$_1$** 'ಸೀಕು$_1$' ನೋ.

**ಚೀಕು$_2$** 'ಸೀಕು$_2$' ನೋ.

**ಚೀಕೊಳುವೆ** 'ಚೀಕೊಟವಿ' ನೋ.

**ಚೀಜು, ಚೀಸ್, ಚೀಸು** (ನಾ). [ಸಂಗೀತ] ಹಾಡು ; ಸಂಗೀತಕೃತಿ : ನಿನ್ನಿನ ಚೀಜು ರುಚಿ ಹತ್ತಲಿಲ್ಲೋ ಭರಮಾ (ರಕ್ತರ್. ೩೦೯). **ಚೀಸ್** : ರೋಷನ್ . . . ಹಿತವಾಗಿ ಒಂದು ಚೀಸ್ ಹಾಡಿದಳು (ರೂಪಕ. ೪೯). **ಚೀಸು** : ಮಾರವದಲ್ಲಿ ಒಂದು ಚೀಸು, ಬೇಹಾಗ್, ಶಹನಗಳಲ್ಲಿ ಎರಡು ದೇವರ ನಾಮಗಳನ್ನು ಹಾಡಿದಳು (ರೂಪಕ. ೩೩೩).
[ ←ಪಾರ. ಹಿಂ. ಮರಾ. ಚೀಜ್ ]

**ಚೀಟಾಡು** (ಕ್ರಿ). ಇಸ್ಪೀಟು ಆಟವನ್ನು ಆಡು ; ಗಂಜೀಫು ಆಡು : ಬೇಸರದಿ ಕುಳಿತಿರಲು, ರಾಯರೆ, ಏಕೆ, ತುಸ ಹೊತ್ತು ಚೀಟಾಡಬಾರದೇ ಎನ್ನುವರು (ನವರಾ. IV, ೨೦–೧೧). [ ಚೀಟು$_2$ + ಆಡು$_1$ ]

**ಚೀಟಾಳು** (ನಾ). ಸಣ್ಣ ಆಳು, – ಸೇವಕ : ಆಟಾಳಿಗೊಂದು ಚೀಟಾಳು (ಗಾದೆ). [ ಚೀಟು$_3$(<ಚಿಟ್ಟು$_1$) + ಆಳು$_3$(<ಆಳ್$_3$) ]

**ಚೀಟಿ$_1$, ಚೀಟು$_1$** (ನಾ). ನಾನಾ ಬಣ್ಣಗಳ ಚಿತ್ರದ ನಮೂನೆಯನ್ನೊಳಗೊಂಡ ಹತ್ತಿಯ ಬಟ್ಟೆ ; ಬಣ್ಣದ ಚಿತ್ರಗಳ ಬಟ್ಟೆ: ಜಂಗಮದೇವರ ಜಂಗಿನ ಪಡವು ಲಿಂಗ ಧರಿಸೋ ಕಾವೀ ವಲ್ಲಿ ಹೋಗಿಗಳ್ ಹೊದೆವೋ ಚೀಟೀದಟ್ಟಿ (ನಾಟದ. ೦೯೨) ; ಲಾಂಗ್‌ಕ್ಲಾತ್, ಚೀಟಿ, ವಾಯಿಲ್, ಮಸ್ಲಿನ್, ಮಲ್ ಇವನ್ನು ಸಾದಾ ನೇಯ್ಗೆ ಉಪಯೋಗಿಸಿ ನೇಯುವರು (ಗೃಹವಿ. ೭೩). **ಚೀಟು$_1$** : (ಮುಂಬಯು. ೬. ೫–೫೯೭).
[ ?. / ತಮಿ. ಮಲ. ಚೀಟ್ಟ; ತೆಲು. ಚೀಟಿ./ಹಿಂ. ಛೀಂಟ್, ಛೀಟ್ ; ಮರಾ. ಚೀಟ್, ಛೀಟ್./ಇಂ. Chints ]

**ಚೀಟಿ$_2$** 'ಚೀಟು$_2$' ನೋ.

**ಚೀಟಿಬಟ್ಟೆ** (ನಾ). = ಚೀಟಿ$_1$ : ಬಣ್ಣ ಬಣ್ಣಗಳ ಚಿತ್ರದ ನಮೂನೆಗಳಿಂದ ಬಣ್ಣ ಕಚ್ಚುವಂತೆ ಧಾಟಿಸಿ ಸಾ., ಗಾಜುಮೆರಗು ಕೊಟ್ಟು ತಯಾರಿಸಿದ ಹತ್ತಿಯ ದಾರದ ಬಟ್ಟೆ(ಯ) ಚೀಟಿಬಟ್ಟೆ(ಯ) (Chints. ಇಂಕಿನಿ).
[ ಚೀಟಿ$_1$ + ಬಟ್ಟೆ$_2$ ]

**ಚೀಟು$_1$** 'ಚೀಟಿ$_1$' ನೋ.

**ಚೀಟು$_2$, ಚೀಟಿ$_2$** (ನಾ). ೧. (ಬರೆಹವಿರುವ) ಸಣ್ಣ ಕಾಗದ ; ಪತ್ರ: ಪಂಚಾಕ್ಷರಿಯ ಮಂತ್ರವೇ ಮಹಾಘನವೆಂದು ಸಂಚಿಕೆಯ ಚೀಟನಿಂ ಬರೆದದಂ ತೂಗಿ ಮೆಱೆವಂ (ಚಂಪು. ೬೨–೬೭); ಕಂದಾಯದ ಚೀಟು ಬರೆಸಿ . . . ಹರಹರ ರೈತರಿಗೂ ಚೀಟಿಗಳು ಕೊಡುವರು (ಮುಹಾಪಂ. II, ೬೦). ೨. ಆಜ್ಞಾಪತ್ರ ; ಅಪ್ಪಣೆ ಚೀಟಿ : ಕೈಯೊಳಗಣ ಹೊಱೆಯ ಬಿಟ್ಟು ತೋಱು ಕೆಡದಿಹರೆ ಜಗದೊಡೆಯನ ಚೀಟ ಕೊಳ್ಳಿ, ಬಂಕೇಶ್ವರಲಿಂಗದಾ (ಸುಂಕಬಂ.೨) ; ಕಾಲನ ಚೀಟುಗಳು ಕವಿವಂತೆ ಕವಿದವು ಹರಿ ಶರವ್ರಾತ (ನಿಥಾಗ. ೦೦–೬೫–೨೭) ; ಗುರುಸುತಂ ಯಮನವರ ಚೀಟುಗಳ್ ಕವಿವಂತೆ ಕವಿಸಿದಂ ಕರ್ಣನೆಯ ವೈರಿಗಳ ನಾಯಕರಿಂಗೆ (ಕುರಂಗ. ೬೪–೫). ೩. ಭೀತಿ, ರೋಗ ಮೊದಲಾದ ಉಪದ್ರವಗಳ ಪರಿಹಾರಕ್ಕಾಗಿ ಉಪಯೋಗಿಸುವ ಯಂತ್ರಗಳನ್ನು ಬರೆಯುವ ತಾಳೆಗರಿ, ತಗಡು ಮೊದಲಾದುವು:ಯಾ ಮಂತ್ರವಂ ನೂರೆಂಟು ಬಾರಿ ವಿಧಿಯಿಂದ ಜಪವಂ ಮಾಡಿ ಚೀಟನಲ್ಲಿ ಬರದು ಉದ್ಯಾನ ಮಧ್ಯದಲ್ಲಿ ಹೂಳಲು ಸಮಸ್ತವಾದ ದುಷ್ಟ ಜಂತುಗಳು ನಾಶವನ್ನೈದುವವು (ಸೌಗಂಧಿ. ೪೨೮–೦೭) ; ಭಟ್ಟರು . . . ಮೂರು ಮಕ್ಕಳಿಗೂ ಚೀಟುಗಳನ್ನು ಕಟ್ಟಿ, ಮಂತ್ರೋದಕವನ್ನು ಪ್ರೋಕ್ಷಣೆ ಮಾಡಿದರು (ಶಂಜಪಂ. ೪೦) ; ಆಚಾರ್ರು . . . ಚೀಟು ಕಟ್ಟುವ, ದಾಟು ತೆಗೆಯುವ ಅಥವಾ ಅನ್ನ ತೆಗೆದುಹಾಕುವ ನೆವದಲ್ಲಿ ಬುಂಡೇದಾಸನ ಪಡಖಾನೆ ಕಡೆಗೆ ಹೋಗಿ ಬರುತ್ತಿದ್ದರು (ನನ್ನೂರು. ೦೮೯). ೪. ಅಂಚೆಯ ಚೀಟಿ ; ಸ್ಟಾಂಪು : ಈ ದುಷ್ಟನು . . . ತನ್ನ ಮನೆಯೊಳಗಿನ ವೀರಾಗ್ರಣಿಗಳನ್ನೂ . . . ಅಜ್ಜಿಗಳನ್ನೂ ವಿಲಾಯತಿ ಚೀಟುಗಳಂತೆ ಅಗ್ಗವಾಗಿ ಮಾರಿಬಿಟ್ಟನು (ಮೋಹಿನೀ. ೦೩೨). ೫. ದಾಖಲೆಪತ್ರ ; ರಿಕಾರ್ಡ್ : ಶ್ರೀನರಸಿಂಹ ಭಾರತೀಪೊಡೆಯರ ದಿವ್ಯನಾಮದಲ್ಲಿ ಮುದ್ರೆ ಚೀಟು ತಾಂಥ್ರ ಶಾಸನ (ಎಳ. VIII, ತೀರ್ಥಹ. ೦೫೩–೦೦ ; ಸು. 1480) ; ಧರಣಿಪತಿಗಳು ತೆರುವ ಕಪ್ಪಕಾಣಿಕೆಯ ಮುಡುವು ಬೊಕ್ಕಸ ಚೀಟು . . . ಬಿಡದೆ ಕೇಳಿದನು (ಕರಿರೀ. ೧೬೨–೭). ೬. ಇಸ್ಪೀಟು ; ಗಂಜೀಫು : ಸಂತೆಗೆ ಚೀಟು, ಮುಂಗೈಗೆ ಬಳೆ (ಗಾದೆ). 'ಚೀಟಾಡಂ' ಪರಾ. **ಚೀಟಿ$_2$** : ೧. ಕಡೆಯ ಸಂಬಳಕೆಲ್ಲ ಮುಕುತಿಸಾಧನವನ್ನು ಕೊಡುವಂತೆ ತಿರುಗದ ಚೀಟಿ ಬರಿಸಿಕೊಟ್ಟ (ಪುರಂದ. ೨–೦೫–೪) ; ಪೆಸರ ಬರೆದೊಂದು ಚೀಟಿಯೊಳಿರಿಸಿ (ಕೊಟ್ಟೂರ್ಬ. ೯–೫೯) ; ಸಾಯುವಾಗ ಒಂದು ಚೀಟಿ ಬರೆದು ಕೊಟ್ಟಿದ್ದಾನೆ, ಎಂದು ಆ ಚೀಟಿಯನ್ನು ಕೊಟ್ಟನು (ಚಿತ್ರೀಪು. ೨೪) ; ರಾಯರ ಚೀಟಿಯು ಬಂದಿತ್ತು (ರಾಜುಕ. ೩೭). ೭. ಔಷಧಿಸೀಸೆ ಮೊದಲಾದುವುಗಳ ಮೇಲೆ ಗುರುತಿಸಲು ಅಂಟಿಸುವ ಸಣ್ಣ ಕಾಗದ ; ಗುರುತಿನ ಚೀಟಿ : ಪ್ರತಿಯೊಂದು ಪಾತ್ರೆಯ ಮೇಲೂ ಆ ಪಾತ್ರೆಯಲ್ಲಿರುವ ಸಾಮಾನಿನ ಚೀಟಿ ಅಂಟಿಸಿದರೆ . . . ತೆಗೆದುಕೊಳ್ಳಲು ಸುಲಭವಾಗುವುದು (ಅಡುಶಾ. ೫೨). ೮. ಹಣದ ಕಂತಿನ ರೂಪದಲ್ಲಿ ನಡೆಸುವ ವ್ಯವಹಾರ: ನಮ್ಮ ಕಛೇರಿಯಲ್ಲಿ ಒಂದು ಚೀಟಿ ಆರಂಭಿಸಿದ್ದೇವೆ (ರೂಢಿ). ೯. ಪ್ರಯಾಣದಲ್ಲಿ ಕೊಂಡುಕೊಳ್ಳುವ ಟಿಕೇಟು : ಬಸ್ಸಿನಲ್ಲಿ ಚೀಟಿ ತೆಗೆದುಕೊಳ್ಳದೆ ಪ್ರಯಾಣ ಮಾಡಬಾರದು(ರೂಢಿ). ೧೦. (ಉಕ) ಔಷಧಿಯ ಪುಡಿ, ಮಾತ್ರೆ ಮೊದಲಾದುವನ್ನು ಕಟ್ಟಿದ ಕಾಗದದ ಚಿಕ್ಕ ಪುಡಿಕೆ.

**ಚೀಟಿಬರು:–** ೧. ಚೀಟಿಯ ಹಣ ಕೈಸೇರು: ಈ ತಿಂಗಳು ನನಗೆ ಚೀಟಿ ಬಂತು (ರೂಢಿ). ೨. (ಅಲಂ) ಸಾವು ಬರು : ಇನ್ನೇನು ಹುಷಾರಾದರು ಎಂದುಕೊಳ್ಳುವಷ್ಟರಲ್ಲಿಯೇ ಚೀಟಿ ಬಂದು ಬಿಟ್ಟಿತು (ರೂಢಿ).
[ ?./ತಮಿ. ಮಲ. ಚೀಟ್ಟು ; ತುಳು. ಚೀಟ್, ಚೀಟಿ ; ತೆಲು. ಚೀಟಿ./ಇಂ. Chit]

**ಚೀಟು$_3$** 'ಚಿಟ್ಟು$_1$' ನೋ.

**ಚೀಡೆ** (ನಾ). ಎಣ್ಣೆ ಅಥವಾ ತುಪ್ಪದಲ್ಲಿ ಕರಿದ ಗೋಲಿಯಾಕಾರದ ಸಿಹಿತಿಂಡಿ : (+).
[ ದೇ.೩ ತಮಿ. ಚೀಟ್ಟೈ ; ಮಲ. ಚೀಡ ; ತೆಲು. ಚೀಡೆ ]

**ಚೀಡೆಹುಳು** (ನಾ). ಸಣ್ಣಹುಳು ; ಕ್ರಿಮಿ : ನಿಜವಾಗಿ ನಮ್ಮ ದೇಹಾತ್ಮಗಳನ್ನು ತಿಂದುಹಾಕಿದ, ತಿನ್ನುತ್ತಿರುವ ಚೀಡೆಹುಳು ಉಪೇಕ್ಷೆ(ಸಾಹಿಚಿ. ೮೫). 'ಕೀಡೆ' ಪರಾ. [ ಚೀಡೆ$_2$ (<ಕೀಡೆ) + ಹುಳು$_2$ (<ಪುಟು$_1$) ]

**ಚೀಣ** (ನಾ). = ಚೀನ$_1$. [ <ಸಂ. ಚೀನ ]

**ಡಾಕಿನಿ** (ನಾ). ೧. ಹೆಣ್ಣು ದೆವ್ವಗಳಲ್ಲಿ ಒಂದು ಬಗೆ ; ಒಂದು ಬಗೆಯ ಹೆಣ್ಣು ಪಿಶಾಚಿ : ಡಾಕಿನಿ ಪಿಶಾಚ ವೇತಾಳ ಭೂತಂಗಳಿಂ ಭೀಕರದೊಳಂ ಜಿಸಿದವಾರ್ದು ರಿಂಗಣಗುಣಿವ ಕಲಿಗಳ ಕಪಾಲಂಗಳು (ಜೈಮಿಭಾ. ೦೨-೪೫); ಸೀತಾರಾಮನು ಒಬ್ಬ ಡಾಕಿನಿಯ ವಶವಾಗಿಬಿಟ್ಟಿದ್ದ (ಬಂಕಿಮ. ೩೦೮). ೨. ಕಾಳಿಕಾದೇವಿಯ ಪರಿಚಾರಿಕೆಯರ ಒಂದು ವರ್ಗಕ್ಕೆ ಸೇರಿದವಳು. ೩. ರಕ್ಕಸಿಯಂ ಕತ್ತಿ,–ಖಡ್ಗ : "ಡಾಕಿನಿಯೆನಲು ರಕ್ಕಸಿಯ ಕತ್ತಿಗಿರದಪ್ಪ ನಾಮಂ" (ಶಬ್ದಮಂ. ೪೪). ೪. (ಆಲಂ) ಕಠೋರಹೃದಯಂದವಳಂ; ಕೆಟ್ಟ ಹೆಂಗಸು : ತನ್ನ ಮರ್ಯಾದೆ ತೆಗೆದ ಡಾಕಿನಿ ಎಂದೊಮ್ಮೆ ಅವಡು ಗಚ್ಚಿದನು (ಗ್ರಾಮಾಯ. ೪೭೨). [ಸಂ. ಡಾಕಿನೀ.]

**ಡಾಕಿನಿದೋಷ** (ನಾ). ಡಾಕಿನಿಯಂ ಆವೇಶದಿಂದುಂಟಾಗುವ ಬಾಧೆ ; ಭೂತೋಪದ್ರವ : ಇಪ್ಪೆಯ ಭೇರ ಆಡಿನ ಮೂತ್ರದಿಂದ ವಿಳುಬಾರಿ ಭಾವನೆಯ ಕೊಟ್ಟು ಆರಿಸಿ ಸೈಂಧವ, ಬಜೆ, ತ್ರಿಕಟುಕ, ಇದರಿಂದ ನಸ್ಯ ಮಾಡೆ, ಭೂತ, ಶಾಕಿನಿ, ಡಾಕಿನಿದೋಷ, ಸನ್ನಿಪಾತ ಜ್ವರಂಗಳು ಬಿಟ್ಟು ಹೋಗುವುವು (ವಿಷ್ಣವಿ. ೧೩೯). [ಡಾಕಿನಿ + ದೋಷ]

**ಡಾಕಿನೀತಂತ್ರ** (ನಾ). [ತಂತ್ರಶಾ] ಒಂದು ಬಗೆಯಂ ತಾಂತ್ರಿಕ ಸಿದ್ಧಿ ಮಂತ್ರ : ಡಾಕಿನೀತಂತ್ರ ಕೂಚಿಮಾರತಂತ್ರ ಶಲ್ಯತಂತ್ರ . . . ವಚನ ತಂತ್ರಾದಿ ತಾಂತ್ರಿಕಸಿದ್ಧಿಮಂತ್ರಂಗಳಂ (ವಿವೇಕ. ೮೦). [ಸಂ.]

**ಡಾಕು$_1$, ಧಾಕು** (ನಾ). ೧. ಮುತ್ತಿಗೆ ; ಮೇಲೆಬೀಳುವಿಕೆ ; ಆಕ್ರಮಣ ; ಆಘಾತ : ನೂಕಿದೊಡೆ ಕರ್ಣಾದಿ ದೊರೆಗಳ ಡಾ[ಪಾಠಾಂ. ಧಾ]ಕನಾನು ವನಾರು ದಿವಿಜಾನೀಕದಲಿ (ಕುವ್ಯಾಅ. ೧೯-೦೩). ೨. ಸತ್ತ್ವ ; ಬಲ ; ಪರಾಕ್ರಮಂ : ಭೀಷ್ಮದ್ರೋಣರಿಂಗೆ ಸರಿಮಿಗಿಲೆನಿಸಿ ತೋರುವೆನು ಕೈಗುಣವನು ಡಾಕನರಿಯದೆ ತನ್ನ ವಿಕ್ರಮದ ಸಿರಿಯನವಿವೇಕಿಗಳು (ತುರಂಗ. ೭೨-೨೩); ಭೀಕರಬಲ ಶಿವಭೂಷನ ಡಾಕಿಂಗಗಿದಖಿಲ ರಾಜರಗಣಿತ ಧನವಮಂ ಬೇಕಾದ ವಸ್ತುಚಯುವನನೇಕವನಿತ್ತೆರಗಿ ತದನುಚರರಾಗಿರ್ದರ್ (ಕೆಳನೃ. ೭-೧೭). ೩. ಪ್ರಭೆ; ತೇಜಸ್ಸು; ಕಾಂತಿ: ತರುಣಿಯರುಗಳಿಟ್ಟಣಿಸಿ ಮೈಮೈಸೋಂಕಲುರು ಹೇಮದೊಡವುಗಳ್ಸೆದು ವರರಜವಿಳೆಯೊಳೊಪ್ಪಿತು ಬಾಲಸೂರ್ಯನ ಕಿರಣದ ಡಾ[ಪಾಠಾಂ.ಧಾ]ಕ ತೋಚಿಸುತ (ಕಂಸವಿ. ೨೪-೪೮) ; ರಥವೆರಸಿ ಡಾಕಿನಿಂ ಥಳಕಿಡುವ ಸಿಂಧ ಸೀಗುರಿ ಛತ್ರಚಾಮರ ಚಮೂಪಂಗಳ (ಪರಶು. ೭-೨೦). ೪. ಜವ; ವೇಗ; ತ್ವರೆ: ಈ ಕಥೆಯ ಧರ್ಮಜಂಗೊರೆದು ಮತ್ತಲ್ಲಿಂದ ಡಾಕಿಲಿ ಪ್ರಭಾಸಕಂ ಬರಲು (ತುರಂಗ. ೩೧-೦೪). ೫. ಲೂಟಿ ; ಕೊಳ್ಳೆ ; ದರೋಡೆ. **ಧಾಕು** : ೩. 'ಧಾಕುಗೆಡಿಸು' ಪರಾ.

**ಡಾಕಳಿ**=ಸತ್ತ್ವಗುಂದು; ತೇಜಸ್ಸು ನಾಶವಾಗು; ಪ್ರಭಾವ ಕುಗ್ಗು: ಸುರಬಲದಾಕೆವಾಳ ಮೃಗೇಂದ್ರನ . . . ಡಾಕಳಿದುದಾ ಸತ್ತ್ವದಲ್ಲಿರ್ದಾ ಕುಠಾರ ಕೃತಾಂತನವ (ಅಂಬಿಕಾ. ೩೭-೨೨). [←ತೆಲು. ಧಾಕ]

**ಡಾಕು$_2$** 'ಡಾಗು$_1$' ನೋ.

**ಡಾಕ್ಟರಿಕೆ** (ನಾ). ಡಾಕ್ಟರನ ಉದ್ಯೋಗ ; ವೈದ್ಯವೃತ್ತಿ : ಅತ್ತ ಡಾಕ್ಟರಿಕೆ ಕೆಲಸಕ್ಕೆ ಪುರುಸೊತ್ತಿದೆಯೇ ಅಂದರೆ, ಬೆಳಗ್ಗೆದ್ದು ಹೋದರೆ ಹೊತ್ತು ಮೀರಿದ ಮೇಲೆಯೇ ಬಂದು ಊಟಮಾಡುವುದು (ಜಾರುದಾ. ೩೩೫) ; ಅವನು ಉಡುಪಿಯಲ್ಲಿ ಡಾಕ್ಟರಿಕೆ ಮಾಡಲಾರಂಭಿಸಿದ ಮೇಲೆ ಮತ್ತೆ ಮತ್ತೆ ಅದರ ಪ್ರಸ್ತಾಪ ಬರುತ್ತಿತ್ತು (ಕೃಹಿಕಾ. ೩೭) ; ಡಂಬನಿಗೂ ಈಗ ತನ್ನ ಮಗನ 'ಡಾಕ್ಟರಿಕೆಯ' ಬಗ್ಗೆ ಸಾಕಷ್ಟು ಹೆಮ್ಮೆಯೆನಿಸಿತು (ದಂಬನಾ. ೭೦). [ಡಾಕ್ಟರು + – ಇಕೆ]

**ಡಾಕ್ಟರು, ಡಾಗದೊರೆ, ದಾಕಂದಾರ, ದಾಕ್ತಾರ, ದಾಗ್ದಾರಂ** (ನಾ). ೧. ರೋಗಿಗಳಿಗೆ ಮದ್ದುಕೊಡುವವನು ; ವೈದ್ಯ ; ಚಿಕಿತ್ಸಕ: ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮದ್ಯಮ. ೧೭೫) : ಆ ಆಫೀಸರವರು ಕೂಡಲೇ ಆ ವಿಷಯವನ್ನು . . . ದನಕರುಗಳ ಡಾಕ್ಟರಿಗೆ ತಿಳಿಯಪಡಿಸುವರು (ಗ್ರಾಮೋಕ. ೧೦೭). ೨. ಗೌರವಾನ್ವಿತವಾದ ಉನ್ನತಪದವಿಯಂನ್ನು ಪಡೆದವನು ; ವಿಶ್ವವಿದ್ಯಾನಿಲಯಗಳು ಕೊಡುವ ಗೌರವಪ್ರಶಸ್ತಿ ಪಡೆದವನಂ; ವಿದ್ವಾಂಸ. **ಡಾಗದೊರೆ** : ೧. ಡಾಗದೊರೆ ಕೇಮಲ್ ಸಾಹೇಬರ ಬಂಗಲೆ ಎಲ್ಲಿದೆ ಬಲ್ಲೆಯ (ಮುಸುಗ. ೦೩೦). **ದಾಕುದಾರ**: ೧. ಕೊನೆಗೆ 'ದಾಕುದಾರ' ರನ್ನು ಬರಮಾಡಬಹುದಿತ್ತು (ಮುಂಗಾಮು. ೧೩೦). **ದಾಕ್ತಾರ** : ೧. ಅಲ್ಲಿ ಈಗಿರುವ ದಾಕ್ತಾರರು ಮನುಷ್ಯರನ್ನು ತಿನ್ನುವುದಿಲ್ಲ ಎಂದೆ ನಾನು (ಮೈಲಿಮೂ. ೨೫). **ದಾಗ್ದಾರು** : ೧. ಅವರನ್ನು ಗಾಂಧೀಜನ, ಓದಿಸೋ ಅಯ್ನೋರು, ದಾಗ್ದಾರು, ಗೋಸಾಯಿಗಳು ಏನೆಂದಾದರೂ ಕರೆದುಕೊಳ್ಳಿ (ಸುವಸಂ. ೦). [←ಇಂ. Doctor]

**ಡಾಗ** 'ಡಾಗು$_2$' ನೋ

**ಡಾಗದೊರೆ** 'ಡಾಕ್ಟರು' ನೋ.

**ಡಾಗಾನ್** (ಕ್ರಿ). ಮುದ್ರೆಯನ್ನು ಪಡೆ ; (ಕಾದ ಕಬ್ಬಿಣದ ಗುಳದ) ಬರೆಯನ್ನು ಹೊಂದಂ: ತತ್ಪಶುವು ಮೇಣವನಲ್ಲದುರೆ ಭಿಕ್ಷುಕನ ಡಾಗಾಂತ ಮನೆಯಾಕಳೆ (ಪರಶು. ೨೨-೨೫). [ಡಾಗು$_1$ + ಆನ್$_1$]

**ಡಾಗೀನು** 'ದಾಗೀನು' ನೋ.

**ಡಾಗು$_1$, ಡಾಕು$_2$, ದಾಕ, ದಾಕು$_1$** (ನಾ). ೧. ಕಾದ ಕಬ್ಬಿಣ ಮೊದಲಾದ ಲೋಹಗಳ ಸಾಧನದಿಂದ ಒತ್ತುವ ಮುದ್ರೆ,–ಗುರುತು : ಬ್ರಹ್ಮನ ಡಾಗು ಬೆನ್ನಮೇಲೆ ವಿಷ್ಣುವಿನ ಡಾಗು ಕೈಯ್ಯ ಮೇಲೆ (ಮೋಳಿಮೂ. ೦೦೨-೪೦೭) ; ಬುಂದಿಯ ಅರಸರ ಕುದುರೆಗಳಿಗೆ ಮೊಗಲರ ಡಾಗನ್ನು ಎಂದಿಗೂ ಹಾಕಕೂಡದು (ಅಕ್ಕರ. ೯೦). ೨. ಕಪ್ಪುಕಲೆ,–ಗುರುತಂ ; ಕರೆ : ರಿಪೋರ್ಟ್ ಸಾಹೇಬರ ಮಸಿಯ ಕಲೆಯ ಡಾಗು ಇಲ್ಲದೆ ಮೇಲೆ ಹೋಗುವಂತೆ ದಕ್ಷತೆ ವಹಿಸುತ್ತಿದ್ದರು (ದೀಪಹ. II, ೨೩೨). ೩. ಮೈಲಿರೋಗ ; ಸಿಡುಬು : ಸಂಸಾರವೆಂಬ ಡಾಗು ಎನ್ನ ಮತ್ತತನದಲ್ಲಿ ಕೊಂದಿತ್ತು (ಮೋಳಿಮಾ. ೪೭-೦೯೩). **ಡಾಕು$_1$**: ೨. "ಕಲೆ" (ಜಾನಕೋ. ೭೩). ೪. ದೇವಿಹಾಕಲು ಬಳಸುವ ಒಂದು ಬಗೆಯ ರಸಿಕೆ ; ಮುಂದೆ ಸಿಡುಂಬುರೋಗ ತಗುಲದಂತೆ ದೇಹದೊಳಕ್ಕೆ ಹೊಗಿಸಿದ ಸಿಡಂಬಿನ ರಸಿಕೆ : (+). ೫. ದೇವಿಹಾಕಿದ ಗುರುತು ; ಮೈಲಿ ಕಲೆ : ಈ ಹುಡುಗನ ಕೈಯಲ್ಲಿ ಡಾಕು ಬಹಳ ಚೆನ್ನಾಗಿ ಕಾಣಿಸುತ್ತಿದೆ (ರೂಢಿ). **ದಾಕ** : ೬. 'ಕಾಲರಾ' ಮುಂತಾದ ಕೆಲವು ರೋಗಗಳು ತಗುಲದಂತೆ, ಅವುಗಳನ್ನು ಪ್ರತಿಭಟಿಸುವ ಶಕ್ತಿಯುಳ್ಳ ಸೂಕ್ಷ್ಮರೋಗಾಣುಗಳನ್ನೊಳಗೊಂಡ ರಸಿಕೆ ; ರೋಗವಿಷ: ಇತ್ತೀಚೆಗೆ ಹೊಸ ದಾಕಗಳ ಶೋಧನೆಯಾಗಿದೆ (ದೇವದೂ. ೨೫೨). **ದಾಕು** : ೬. ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ, ಟೈಫಾಯ್ಡ್ ಇತ್ಯಾದಿ ೧೮ ಬೇನೆಗಳಿಗಾಗಿ ದಾಕು ಹಾಕುವ ಯೋಜನೆಯು ನಡೆದಿದೆ (ದೇವದೂ. ೨೫೨).

**ಡಾಗನೊತ್ತು** = ಮುದ್ರೆಯೊತ್ತು ; ಗುರುತುಮಾಡು ; ತನ್ನದೆನಿಸಿಕೊಳ್ಳು: ಹರಿಯೆದೆಯೊಳು ಬೊಮ್ಮನ ಬಾಯೊಳು ಪುರಹರನ ಪಾಘಾಂಗದೊಳು ಅರಲಸರಲ ಡಾಗನೊ[ಪಾಠಾಂ. ತಾಗಲೊ]ತ್ತಿದಂಗಜ ವೀಥ ಬರಲಂಜಿದನು ರಾಮನೆಡೆಗೆ (ತುರಾಸಾಂ. ೩೩-೧೦) ; ನಾಗಭೂಷಣನಂತಿರಲಿ ನಿರ್ಜರರೊಳು ಭೋಗದೇವೇಂದ್ರನ ಮೇಲೆ ಡಾಗನೊತ್ತಿದೆ ನೋಡು (ಮೋಹತ. ೩೮-೧೧); ಸುರಪನಂಗದಲಿ ತಮ್ಮಯ ಡಾಗನೊತ್ತಿದೆವು ಧರೆಯೊಳಿನ್ನುಳಿದ ಮಾನವರೆಮ್ಮ ಪೆಣ್ತನಕೆ ಸರಿಯೆಯೆಂದೆಂಬ ಬಿರುದಿನ ಪಾರನಾರಿಯರು ಪುರದಲ್ಲಿ ಕಣ್ಗೆಸೆದರು (ಭಿಕ್ಷಾಜ. ೨-೦೨) ; ಧಾತನ ಜಿಹ್ವೆಪೀಠದೊಳು ನಿಂದೆಯಾಖಂಡಲಗೆ ಡಾಗನೊತ್ತಿದೆ (ಪ್ರಭುಪು. ೫-೧೫೦).

**ಡಾಗಿನ ಪಶು** = ಮುದ್ರೆಯೊತ್ತಿದ ಪಶು : ಡಾಗಿನ ಪಶುಗಳೆಲ್ಲರೂ ಭೇದವನಱಿಯಬಲ್ಲರೇ (ಅಂಬಿವ. ೩೯೯-೮೭); ಡಾಗಿನ ಪಶುಗಳಿಗೆ ಅನಾಗತನ ಸುದ್ದಿ ಏಕೋ (ಮೋಳಿಮಾ. ೧೦೨-೪೦೭); ಇಂತಿವರೆಲ್ಲರು ಡಾಗಿನ ಪಶುಗಳು ವೇಷಧಾರಿಗಳು (ಮೋಳಿಮಾ. ೧೮೩-೬೯೨).

[ ←ಮರಾ. ಡಾಗ್, ದಾಗ್ ; ಪಾರ. ಹಿಂ. ದಾಗ್./ತಮಿ. ಡಾಕು ; ತೆಲು. ಡಾಗು ]

**ಡಾಗು₂, ಡಾಗ** (ನಾ). ೧. ಸಾಮಾನು ; ಗಂಟು; ಮೂಟೆ ; ಭಾಂಗಿ : ಮಜೂರಿಯು ಡಾಗಿನ ಆಕಾರದಂತೆ ಮತ್ತು ಬದುಕಿನ ಮಹತ್ತ್ವ ಇದ್ದಂತೆ (ಮುಂಬವ್ಯಾ. ೧೯, ಪ್ರಸ್ತಾವನೆ); ರಾಶಿರಾಶಿಯಾಗಿ ಪಾರ್ಸಲ್ಲ "ಡಾಗು" ಗಳು ಬಿದ್ದಿದ್ದವು (ನಡದಾ. II, ೧೨೭೭). ೨. (ಒಬ್ಬ ಮಾಲೀಕನ) ಅಂಶ ; ಪಾಲು ; ಭಾಗ ; ಹಿಸ್ಸೆ : ನಾಲ್ವತ್ತು ಎಕರೆಯ ಏಕ ಡಾಗನ್ನು ಮಾಡಿಕೊಂಡು (ದೀಪಹ. II, ೨೮೮). **ಡಾಗ :** ೧. ಕಿರಾಣಿಯ ಬದುಕು ಒಂದು ಡಾಗದ ಒಳಗೆ ಒಂದೇ ತರದ್ದು ತರಿಸಿಕೊಳ್ಳುವವರಿಗೆ ಮಜೂರಿಯ ದರ (ಮುಂಬವ್ಯಾ. ೧೭, ಪ್ರಸ್ತಾವನೆ).

[ ←ಮರಾ. ಡಾಗ್ ]

**ಡಾಗೋಬ** (ನಾ). (ಬೌದ್ಧರ) ಸ್ತೂಪ ; ಪಗೋಡ ; ಸ್ತೂಪದ ಆಕಾರದಲ್ಲಿರುವ ಬಹಳ ಎತ್ತರವಾದ ಕಟ್ಟಡ ; ಸಮಾಧಿ : ಅನಂತರ ಬುದ್ಧನ ಅಸ್ಥಿ ಮೊದಲಾದ ಅವಶೇಷಗಳನ್ನು 'ಡಾಗೋಬ' ಗಳಲ್ಲಿ ಇರಿಸುತ್ತಿದ್ದರು (ಬಾಲಪ್ರ. II, ೮೫೬); ಗುಹೆಯೊಳಗೆ ಸೂರ್ಯನ ಕಿರಣವು ಪ್ರಾತಃಕಾಲದಲ್ಲಿ ನೇರಾಗಿ ಡಾಗೋಬದ ಮೇಲೆ ಬೀಳುವಂತೆ, ಕಮಾನುಳ್ಳ ಕಿಟಕಿಗಳನ್ನು ಕೊರೆದಿರುತ್ತಾರೆ (ಬಾಲಪ್ರ. III, ೧೬೭೦). 'ಪಗೋಡ' ಪರಾ. [←ಪಾಲಿ. ಡಾಬೆಗ; ಮರಾ. ಡಾಗೊಬಾ./ಸಂ. ಧಾತುಗರ್ಭ ]

**ಡಾಡಿಮ** 'ದಾಳಿಂಬ' ನೋ.

**ಡಾಣ** 'ದಾಣ₃' ನೋ.

**ಡಾಣಾಡಂಗರ** 'ಧಣಾಡಂಗುರ' ನೋ.

**ಡಾಣಾಡಂಗುರ** 'ಧಣಾಡಂಗುರ' ನೋ.

**ಡಾಣಾಡಾಣೆ** (ನಾ). ದೊಣ್ಣೆಯಿಂದ ಪರಸ್ಪರ ಹೊಡೆದಾಡಿ ಮಾಡುವ ಜಗಳ,-ಯುದ್ಧ : ಡಾಣಾಡಾಣೆ, ಖಾಡಾಖಾಡಿ (ಶಬ್ದಾನು. ೩೩೦ ಪ್ರಯೋ). [ <ಡಾಣೆ₂ + ಡಾಣೆ₂ + – ಇ₃ ]

**ಡಾಣೆ₁** 'ದಾವಣಿ₁' ನೋ.

**ಡಾಣೆ₂** 'ಧಾಣೆ₁' ನೋ.

**ಡಾಣೆ₃** 'ದಾಣ₂' ನೋ.

**ಡಾಣೆಗ** (ನಾ). ದಪ್ಪನಾಗಿರುವವನು ; ದಡಿಯ ; ಧಾಂಡಿಗ : ದುರಹಂಕಾರಿ ಹಮ್ಮಿನ ಹೆಗರಣಿಗನು ಡಂಬದ ಡಾಣೆಗರೆರೆಯ (ಹೋರಬ. ೯-೬೪). [ ಡಾಣೆ₂ (<ಧಾಣೆ₁) + – ಇಗ ]

**ಡಾಣೆ₁** 'ದಾಣ₂' ನೋ.

**ಡಾಣೆ₂** 'ಧಾಣೆ₁' ನೋ.

**ಡಾಬು, ದಾಬು** (ನಾ). ಸ್ತ್ರೀಯರು ನಡುವಿನಲ್ಲಿ ಧರಿಸುವ, ಚಿನ್ನದ ಅಥವಾ ಬೆಳ್ಳಿಯಿಂದ ಮಾಡಿದ ನಡುಪಟ್ಟಿ ; ಒಡ್ಯಾಣ : ಮಣಿಯಡ್ಡುಗೆಯ ಡಾಬಿನ ಮೇಖಲಾಂಚಿತ (ಅನಂರಾ. ೦-೩-೩೫); ಕಿರೀಟವನ್ನು ಡಾಬಿನ ಉಡುದಾರವನ್ನು . . . ಬ್ರಾಹ್ಮಣನಿಗೆ ಕೊಟ್ಟು (ಕೃವಾಆ. ೨೦೦); ಕಡಗ ಪಟ್ಟಿಯು ಡಾಬು, ಬುಗುಡಿ ಗೀರ್ಬಳೆ ಸರಿಗೆ (ಸಿದ್ಧಕಾ. ೮-೦೨); ಸಂಕ್ಷುಭಿತಪಕ್ಷಿಶ್ರೇಣಿಯೇ ಡಾಬು (ಧ್ವನ್ಯಾಲೋ. ೬೭); ಕಟಿಪ್ರದೇಶದಲ್ಲಿ ವಜ್ರದ ಡಾಬು ವಿರಾಜಿಸುತ್ತಿತ್ತು (ದೌಲತ್. ೩೬೮). **ದಾಬು :** "ಡಾಬು (ದಾಬು)–ದಾಮನ್ = ಒಡ್ಯಾಣ" (ತದ್ಭಕೋ. ೦೭).

[ ದೇ.॥ ತಮಿ. ತೆಲು. ಡಾಪ್ಪು./ಸಂ. ದಾಮನ್ ]

**ಡಾಮರ₁** (ಗು). ೧. ಭಯಂಕರವಾದ ; ಆಶ್ಚರ್ಯಕರವಾದ. (ನಾ). ೨. ದಂಗೆ; ಮುತ್ತಿಗೆ; ಲಗ್ಗೆ ; ಆಕ್ರಮಣ; ಸೂರೆ: ಆ ಮಾಧವೀಲತಾಮಂಟಪಮಂ ಕಾಮನ ಡಾಮರಕ್ಕಳ್ಕಿ ವನದುರ್ಗಂಬುಗುವಂತೆ ಪೊಕ್ಕು (ಪಂಪಭಾ. ೫-೭ ವ); ತೋಮರಂ ಜವನ ಡಾಮರವಾದುವು (ಪಂಪರಾಮಾ. ೧೩-೬೦); ಕಾಮನ ಡಾಮರಮಲ್ಲಿ . . . ಪಲ್ಲೊರೆವ ಮದಾಳಿಯಲ್ಲಿ ಸಖಿ ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೩೭); ತನಗುಣಲಿಲ್ಲದುದಂ ಪಸವೆನ್ನದೊಡಂ ತನ್ನಂ ಕೋಟ್ಟಿಟ್ಟುದಂ ಡಾಮರಮೆನ್ನದೊಡಂ . . .ಬಂಧಹೇತುಗಳಂ ಪೆರ್ಚಿಸುವ ಮೈಯ್ಯಂ ಪಾಪದ ರೂಪೆನ್ನದೊಡಂ ನೀಮಱಿವಿರ್ (ಜೀವಸಂ. ೭೩-೫). ೩. ರೋಗರುಜಿನಗಳ ಬಾಧೆ ; ವ್ಯಾಧಿ ; ಪೀಡೆ : ಪಾಂಡ್ಯರಾಜ್ಯದಲ್ಲಿ ಎರಡು ವರ್ಷಗಳಿಂದಲೂ ವೀರಕ್ಷಾಮವು ಆವರಿಸಿದ್ದಿತು. ಈ ಯುದ್ಧವು ಸಂಭವಿಸಿದ ಮೇಲೆ ಡಾಮರಕ್ಕೂ ಆರಂಭವಾಯಿತು (ಶ್ರೀರಾಯ. ೩೫೯). ೪. ತೊಂದರೆ ; ಕೋಟಲೆ ; ಉಪದ್ರವ : " ಉಪಸರ್ಗಮರಿಷ್ಟಂದುಷ್ಟಪೀಡೆ ಡಾಮರಮಜನ್ಯಮಿಾತಿಪ್ರಕರಂ " (ವಸ್ತುಕೋ. ೯೬-೦) ; ಅರಿಷ್ಟಮುಪಸರ್ಗಮುತ್ಪಾತಮುಪಲಿಂಗಮಜನಂ ಡಾಮರಂ ವಿಡಂಬರಿ ವಿಷ್ಟವವೆನಲ್ಕುಪದ್ರವಮಕ್ಕು (ಮಂಗರಾ. ೮-೨೭) ; ಮನೋಜಂ ಮುಯ್ವಂ ನೋಡಿ ವಿಯೋಗಿಗೆ ಕಯ್ಗೊಸಿದನಾಯ್ತು ಡಾಮರಂ ಮಾಮರದಿಂ (ಮಲ್ಲಿಪು.೫-೦೦). ೫. ಬರಗಾಲ ; ಕ್ಷಾಮ ; ದುರ್ಭಿಕ್ಷ : ಡಾಮರ ಆಗಿದ್ದರೂ ಮಿಗತಾಗಿತ್ರಿವಾಚ್ಯವಾಗಿ ಸರ್ವವೃತ್ತಿಯ ನಡೆಸಬೇಕೆಂದು ಶಿವಾರ್ಪಿತವೆಂದು ಕೊಟ್ಟೆವಾಗಿ (ಮೈಆರಿ ೧೯೨೮ ; ೭೩-೩೨ ; 1509). ಕ್ಷಾಮ ಡಾಮರಂಗಳುಂ ಬೇರುಡಿದು ಪಾಟಿಸ್ಸೋಕುಂ ಪೊಟಲೊಳ್ (ರಾಮಾಶ್ವ. ೦೪-೨೯). ೬. ಗಲಿಬಿಲಿ ; ಗದ್ದಲ ; ಗೊಂದಲ. ೭. ಯಾವುದಾದರೂ ಆಶ್ಚರ್ಯಕರವಾದ ವಸ್ತು, ನೋಟ ಅಥವಾ ಘಟನೆ.

**ಡಾಮರಮಲ್ಲ** = ಆಕ್ರಮಣವನ್ನು ಎದುರಿಸಬಲ್ಲ ಶೂರ ; ಶತ್ರುಗಳನ್ನುಆಕ್ರಮಿಸುವುದರಲ್ಲಿ ದಿಟ್ಟನಾದವನು ; ಒಂದು ಬಿರುದು : ಸಿನ್ದನಾರಾಯಣ ನಲ್ಲಗ್ಗೆಸ್ಗ ನಲ್ಲ ಡಾಮರಮಲ್ಲ ಏಕಾಂಗಶೂದ್ರಕ ಶ್ರೀಪುಲಿಕಾಲ (ಎಇ. III, ೨೩೨-೯ ; 1070). [ ಸಂ. ]

**ಡಾಮರ₂, ಡಾಂಬರ, ಡಾಂಬರು, ಡಾಮರು, ದಾಂಬರು** (ನಾ). = **ಡಾಂಬರೆಣ್ಣೆ :** ಪಟಗರದ ಪೀಪಗಳೂ, ಡಾಮರದ ಪೀಪಗಳೂ, ರಾಂಜಾ ಪೀಪಗಳೂ (ಮುಂಬವ್ಯಾ. ೯) ; ಆ ಗಳಿಗೆಯಲ್ಲಿ ಆರಂಭವಾಗಿತ್ತು . . . ರಸ್ತೆಯ ಹೊದಿಕೆ ಡಾಮರ ಕಳಚಿ ಚೂಪುಕಲ್ಲು ಕಾಲಿಗೆ ಮುಳ್ಳಾಗುವುದಕ್ಕೆ (ಏಳಜೀ. ೧೩೫). **ಡಾಂಬರ :** ನೀರು ಬಿಟ್ಟ ಮೇಲೆ ತೆರೆದಿರುವ ಕಟ್ಟಿಗೆಗಳು ಹುಳಹತ್ತಿ ಕೆಡದ ಹಾಗೆ ಅವುಗಳಿಗೆ ಎಣ್ಣೆರಾಳ . . . ಹಚ್ಚಬೇಕು. ಡಾಂಬರವನ್ನಾಗಲಿ ರೋಗಂಧವನ್ನಾಗಲಿ ಹಚ್ಚಿದರೂ ಬರುತ್ತದೆ (ಕೃಷಿಪ್ರ. ೧೦೨) ; ಡಾಂಬರದಲಿ ಮೈಮೆತ್ತಿದೆ (ನವ್ಯಧ್ವ. ೦೫-೦೦) ; ಸುತ್ತೂಕಡೆಗೆ ಡಾಂಬರ ಸುಟ್ಟ ವಾಸನೆ ಬರಹತ್ತಿತು (ಸ್ಮೃತಿಚಿ. ೪೩೭) ; ಇಧರ ಜೊತೆಗೆ ಒಬ್ಬರ ಮುಖಕ್ಕೊಬ್ಬರು ಡಾಂಬರವನ್ನು ಬಳಿಯುತ್ತಿದ್ದರು (ರಂಗರೋ. ೪೮). **ಡಾಂಬರು :** ಡಾಂಬರಿನೊಳಗೆ ಇದ್ದಲೀ ತೆಯ್ದು ಬಯಕೀ ತೀರಿಸಿಕೊಳ್ಳಲಿಕ್ಕೆ ಕುಡಧಾಂಗ ಕಾಣ್ತದ (ತಿಡುಗು. ೦೫). **ಡಾಮರು :** ಮಾರ್ಗವೇನೋ ಡಾಮರು ಹಾಕಿದ ಮಾರ್ಗ ಆದರೆ ಅಲ್ಲಲ್ಲಿ ಡಾಮರು ಎದ್ದು ಹೋಗಿ ದೊಡ್ಡ ದೊಡ್ಡ ಹೊಂಡಗಳು ಹುಟ್ಟಿದ್ದವು (ಸೀತಾರ. ೯೪) ; ದಾರಿ ಡಾಮರು ಹಾಕಿದ ಒಳ್ಳೆಯ ರಸ್ತೆ (ಅಬೂಬ. ೭). **ದಾಂಬರು :** ವಾಹನದ ಗಾಲಿ ಆದರುಸಿರು ಕಪ್ಪು ದಾಂಬರಿನ ಬೀದಿ ಕಪ್ಪು ಈ ಕಪ್ಪು ಪ್ರಿಯವು, ಅಪ್ರಿಯವದೇಕೆ ಹೇಳೆನ್ನ ಮೈಯ ಕಪ್ಪು? (ಕರುಶ್ರೀ. ೭೩-೦೫).

[ ←ಹಿಂ. ಮರಾ. ಡಾಮರ್ ]

**ಡಾಮರರಸ್ತೆ,** ಡಾಂಬರರಸ್ತೆ (ನಾ). ಡಾಮರ ಹಾಕಿದ ರಸ್ತೆ : ಈ ಮಧ್ಯಾಹ್ನದ ಉರಿಬಿಸಿಲಿಗೆ ಎಕ್ಕಡವಿಲ್ಲದೆ ಡಾಮರರಸ್ತೆಯಲ್ಲಿ ನಡೆಯುವಂತಿಲ್ಲ (ರೂಢಿ). **ಡಾಂಬರರಸ್ತೆ :** ಅವನು ಡಾಂಬರರಸ್ತೆಗುಂಟ ಒಂದೇ ಸವನೇ ಸಾಗತೊಡಗಿದ (ಮುಕ್ತ್ಯ.ದ. ೬೭) ; ಆ ಕಪ್ಪು ಡಾಂಬರರಸ್ತೆಯನ್ನು ನೋಡುತ್ತಿದ್ದಂತೆ ಏಕೋ ಅರ್ಥವಾಗದ ಸಮಾಧಾನ ಶಾಂತಿಗಳು ಸುರೇಶನ ಮನಸ್ಸಿನಲ್ಲಿ ನೆಲಸಹತ್ತಿದವು (ಅಬೋಲೀ. ೦೦೭). [ ಡಾಮರ₂ + ರಸ್ತೆ]

**ಡಾಮರು** 'ಡಾಮರ್₂' ನೋ.

**ಡಾಮರ್ಬಂಕೆ** (ನಾ). ಒಂದು ಬಗೆಯ ಸಸ್ಯ : ಬಿಳೀಭೋಗಿ, ಆಸಿನ ಮರ, ಅಶ್ವಕರ್ಣ, ಡಾಮರ್‌ಬಂಕೆ (ಮೈಪಿಗಿ. ೭೦- ೦೪೨೫). [ ? ]

**ಡಾಯಿಮ** (ನಾ). ಒಬ್ಬಾತನ ಹೆಸರು : ರಟ್ಟರ ಮೇರು ಡಾಯಿಮ ಮಹೀಪಾಳಂ ನೃಪಾಳೋತ್ತಮಂ (ಸೌಇಇ. XX, ೨೪೭-೯ ; 1087). [?]

**ಡಾಲರು** (ನಾ). ಅಮೇರಿಕಾದಲ್ಲಿ ಬಳಕೆಯಲ್ಲಿರುವ ಒಂದು ನಾಣ್ಯ : ಈ ಮನೆಯ ಮುಂಗಡ ಬಾಡಿಗೆ ೨೫ ಡಾಲರು (ಸಮುಶ್. ೦೨೪); ಟಿಕೇಟಿನ ಬೆಲೆ ಒಂದು ಡಾಲರು (ಮಿಹಾತ್ಮ್ಯ. ೧೦೩) : ಹೂವಿಲ್ಲ ಹಣ್ಣಿಲ್ಲ ಡಾಲರನು ಪಡೆಯುವ ಭಾಗ್ಯವಿಲ್ಲ (ಅರರೋ. ೧೦). [ ←ಇಂ. Dollar ]

**ಡಾಲಿಬಾರು** (ನಾ). ಚರ್ಮದ ಪಟ್ಟಿ (?) : ತುರುಕರ ಡಾಲಿಬಾರಿನ ಪಟ್ಟ ತಿಂಬರು ಹೇರಿ ಪೈಜರವ (ಕಾಲಸಂ. ೨೩-೧೦). [ ? ]

**ಡಾಲಿಮ** 'ದಾಳಿಂಬ' ನೋ.

**ಡಾಲಿಯಾ** 'ಡೇಲಿಯಾ' ನೋ.

**ಡಾಲು₁** 'ಡಾಳ₁' ನೋ.

**ಡಾಲು₂,** ಡಾಳ₂, ಡಾಳು, ಧಾಲು₂, ಧಾಳ (ನಾ). ೧. ಗುರಾಣಿ : "ಡಾಲು—ಧಾಲ=ಅಡ್ಡಣ" (ತದ್ಭಕೋ. ೦೭); ಬಿರುದಿನ ಡಾಲ ರಾವುತರೆಂಟು ಸಾವಿರ ತುರಗವನೇಱಿಯೈತರಲು (ಕಂನವಿ. ೧೦-೮೭) ; ಗರುಡಹನುಮ ಮಕರದ ಟೆಕ್ಕೆಯ ಡಾಲಬಿರುದಿನ ದೊರೆರಾಯನಾರೊ (ಕಂನವಿ. ೦೩-೩೭); ಅವನ ಡಾಲು ಡಮಾಮಿ ಸತ್ತಿಗೆ ಕೆಂಪಿನ ನಿಶಾನಿಯುಮಂ . . . ಕೈಸೆಱೆ ತಂದು ರಾಯರಿಗೊಪ್ಪಿಸಲ್ (ಕೆಳನೃ. ೨-೪೯) ; ಆದರಿಂದ (ಗಂಡಕದ ತೊಗಲಿನಿಂದ) ಬಹಳ ಬೆಲೆಯುಳ್ಳ ಡಾಲುಗಳು ಆಗುತ್ತವೆ (ಮುಂಬಯಿ. ೪-೪೮) ; ಕಾಲ್ದಳದವರು ಎಡಗೈಯಲ್ಲಿ ಹದಮಾಡಿದ ಎತ್ತಿನ ಚರ್ಮದ ಡಾಲುಗಳನ್ನು ಹಿಡಿದಿರುತ್ತಾರೆ (ಪ್ರವಾಇ. I, ೪೦ ಅಡಿಟಿ). **ಡಾಳ₂ :** "ತೊಪ್ಪರ ದಂಡೆ ಡಾಳ ಕಳಾಸ[ಪಾಠಾಂ. ಡೋಳಕ್ಕು ಕಳಾಸ]ಚಾಳೆಯ ಮಂಡಿ ಸೀರಣಂ ಹೆಚ್ಚೆಯಕ್ಕುಂ(ಮುಂಗರಾ.೮೮-೩೮); ಬಿರುದಿನ ಡಾಳ ಹಯದ ಮೊತ್ತದಲಿ ತಮಾಸುರನಂತೆ ಮೆಱೆವವನಾರು (ಕಂನವಿ. ೦೨-೪೩) ; ಬಿರುದಿನ ಡಾಳ ದರ್ಪದೆ ಸೆಳೆತಂದು ಭೂಪಾಲನಿದಿರಿನಲಿ ತಪ್ಪದೆ ಮೆದೆಯನೊಟ್ಟಿದರು (ಕಂನವಿ. ೦೫-೧೧೭). **ಡಾಳು :** ೧. ಬಿರುದಿನ ಡಾಳು ಡಮಾಮಿ ಮಕರಟೆಕ್ಕೆಯುರುತರ ರಾಜಚಿಹ್ನೆಗಳ ಪರಿಯ ತೋಱುತ(ಕಂನವಿ.೩-೩೭); ಅಂಕೆಯಿಲ್ಲದೆ ನಾನಾ ಬಗೆ ಚಿತ್ರಗಳಂಕಿತವಹ ಡಾಳುಗಳ ಅಂಕುಶಖಾನನ ತೇಜಿ ಸಾವಿರವಾಗ ಮುಂಕೊಂಡು ಬಂದುವು (ಕಂನವಿ. ೦೮-೮೪). **ಧಾಲು₂:** ೧.ಬೆಳ್ಳಿ ಧಾಲು ಚಿನ್ನದ ಮುಲಾಮಿನ ಗುಬ್ಬಿ (ಎಕ. XIV, ನಂಜನ. ೨೯೨-೯ : 1847) ; ಕೈಯೊಳಗಿನ ಕತ್ತಿ ಧಾಲುಗಳನ್ನು ನೋಡಿರಿ (ಮೋಹಿನೀ. ೬೭) ; ನಾಯಕನು ಚಾತುರ್ಯದಿಂದ ಖಡ್ಗಕ್ಕೆ ತನ್ನ ಧಾಲನ್ನೊಡ್ಡಿ ಹೊಡತವನ್ನು ತಪ್ಪಿಸಿಕೊಂಡನು (ಕುಮುದ. ೦೭) : ಒಂದು ಕೈಯಲ್ಲಿ ಎತ್ತಿನ ತೊಗಲಿನ ಧಾಲನ್ನು ಜೋತುಬಿಟ್ಟು . . . ಇಪ್ಪತ್ತೈದು ಹುಡುಗರು ಬಂದರು (ಮೇದಿಮ. ೧೧೦). ೨. ಪಂದ್ಯಗಳಲ್ಲಿ ಗೆದ್ದಿರುವ ತಂಡಕ್ಕೆ ಕೊಡುವ ಗುರಾಣಿಯಾಕಾರದ(ಬೆಳ್ಳಿಯ)ಪಾರಿತೋಷಕ,- ಬಹುಮಾನ : ಗೆದ್ದವರಿಗಿದ್ದೆಯಿದೆ ಬೆಳ್ಳಿಯ ಧಾಲು (ನೆಂಮು. ೩೩-೨೪). **ಧಾಳ :** (೬). [ <ಸಂ. ಧಾಲ ]

**ಡಾಲು₃** (ನಾ). ಒಂದು ಬಗೆಯ ರಣವಾದ್ಯ : ಕೊಂಬುಕಹಳೆ ತಮ್ಮಟೆ ಡಾಲು ಡಮಾಲು ರಾಯಭಟಿ ಮುಂತಾದ ರಣವಾದ್ಯಗಳು ತಟ್ಟನೆ ನಿಂತವು (ರೂಲೀಪಾ. ೫). [ ? ]

**ಡಾಲುಹೊಡೆ** (ಕ್ರಿ). ಪ್ರಕಾಶವನ್ನು ಬೀರು ; ಥಳಥಳಿಸು : ಅವಳು ಕಿವಿಯಲ್ಲಿ ಹಾಕಿಕೊಂಡಿದ್ದ ಕೆಂಪಿನೋಲೆಗಳು ನಾಲ್ಕು ಕಡೆಗೂ ತಳತಳನೆ ಡಾಲುಹೊಡೆಯುತ್ತಿದ್ದುವು (ಭಾರವಿ. ೧೧೦).

[ ಡಾಲು₁ (<ಡಾಳ₁) + ಹೊಡೆ₁ (<ಪೊಡೆ₁) ]

**ಡಾಲ್ಮರ** (ನಾ). ಒಂದು ಬಗೆಯ ಮರ : ಕಲ್‌ಗರಿಕೆ, ಡಾಲ್‌ಮರ, ಗವುಡ, ಮದಗಿರಿಬೇವು (ಮೈಪಿಗಿ. ೨೦-೩೮೦). [ ? + ಮರ₁ ]

**ಡಾವ್** 'ಡಾವು' ನೋ.

**ಡಾವಣ** 'ದಾವಣಿ₁' ನೋ.

**ಡಾವಣಿ** 'ದಾವಣಿ₁' ನೋ.

**ಡಾವಣಿಕಟ್ಟು** 'ದಾವಣಿಗಟ್ಟು₁' ನೋ

**ಡಾವಣೆ** 'ದಾವಣಿ₁' ನೋ.

**ಡಾವಣೆನೇಣ್** (ನಾ). ದನ ಮೊದಲಾದಂವನ್ನು ಸಾಲಾಗಿ ಕಟ್ಟುವ ಉದ್ದವಾದ ಹಗ್ಗ : ವಾರುವಗಳ ಡಾವಣೆನೇಣ್ಗಳ ಬಲು ಜೀರುಗುಣಿಕೆಗಳ ಪರಿದು ಕೇರಿಕೇರಿಯೊಳು ತಮ್ಮಿಚ್ಛೆಯೊಳಗೆ ಸಲೆ ತಾಱುಮಾಱಾಗಿ ಯೋಡಿದವು (ಕಂನವಿ. ೧೫-೯೦). [ ಡಾವಣೆ (<ದಾವಣಿ₁) +ನೇಣ್₁ ]

**ಡಾವಪೇಚು,** ಡಾವುಪೇಚು (ನಾ). ೧. ಉಪಾಯ ; ತಂತ್ರ : ಗೊತ್ತದ ನನಗ, ನಿಮಗೇನು ಖಾಸಗೀ ಮಾತಾಡೋದದ ಎಂಬೋದು.ಮುತ್ಸದ್ದಿಗಿರೀ ಡಾವಪೇಚು ನಡಸೋದದ (ಜೂಜು. ೦೭). **ಡಾವುಪೇಚು:** ೨. ಪಟ್ಟು: ನೋಡಿದ ಹಿಡಿತಗಳನ್ನೂ ಡಾವುಪೇಚುಗಳನ್ನೂ ಬಣ್ಣಿಸುವ ರಭಸದಲ್ಲಿ . . . ಅವನನ್ನು ನೆಲಕ್ಕೆ ಅಪ್ಪಳಿಸುವರು (ಗಾಳಿಪ. ೬೫).

[ ←ಮರಾ. ಡಾವಪೇಚ್ ]

**ಡಾವರ,** ಡಾವರಿ, ಡಾವುರ, ಡಾಹರ, ದಾವರ (ನಾ). ೧. ಬರಗಾಲ ; ಕ್ಷಾಮ ; ದುರ್ಭಿಕ್ಷ : " ಡಾವರಮಾ ಕ್ಷಾಮಮುದಕ್ಕುಂ" (ಕವಿಕಂ.೨೭೯): ಇಂಚೆಯ ಪಸವಿನ ಬಱದ ಕಳೆಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಬಿಡಿವೊಲಾದುವಾನಾಡೂರ್ಗಳ್ (ಶಂಪಥಾ. ೮-೫೦) ; ಗೋಪ್ರವೇಶಲಕ್ಷಣ (ನಿಮಿತ್ತ) ಏಡಂ ಪೊಕ್ಕೊಡೆ ಚಿತ್ರವೃಷ್ಟಿ . . . ಸೇಡಂ ಪೊಕ್ಕೊಡೆ ಡಾವರಂ (ಅಟ್ಟಮ. ೪-೭). ೨. ಕೊಳ್ಳೆ ; ಸೂರೆ ; ಲೂಟಿ : ದಳವುಳ ಬೆಳುಗವತೆಯನ್ಯಾಯ ಡಾವರ [ಪಾಠಾಂ. ಪರಿಭವ] ಕಕ್ಕು ಡೊಳ್ಳಾಸ . . . ನಿನ್ನೊಳಿಲ್ಲಲೆ ರಾಯ ಕೇಳೆಂದ (ಕುವ್ಯಾಸ. ೦-೪೫) ; ಕರುಬುತನ ದುರ್ಭಿಕ್ಷ ಡಾವರ ಪೊರಿಗೆ ಲಂಚ . . . ಸ್ವಪ್ನದೊಳಗಿಲ್ಲಾಳ್ಕೆಯೊಳು ಸಳನ (ಅಂಬಿಕಾ. ೪೮-೯೦). ೩. ಬಾಧೆ ; ಹಿಂಸೆ ; ಕೋಟಲೆ ; ಉಪದ್ರವ : ಪುಂಡರೀಕ ಭೋಂಕನೆ ನಿನಗೀಗಳಿಂದ್ರಿಯದ ಡಾವರವೆತ್ತಣಿನೆತ್ತ ಬಂದುದೋ (ಕಾದಂಪೂ. ೭೭೪) ; ಡಕ್ಕೆಯ ಡಾವರಕ್ಕೆ ಸಿಕ್ಕಿ ನೊಂದೆನು (ಹರಿಭಕ್ತ. ೨೨೦-೭) ; ಕಾಮನ ಡಾಪರಂ ಕೊಳ್ಳದುಳಿದ ಮೊಯೆಯ ಮಾತು ಬೇಡ (ಹಜಕಾ. ೮-೫೯): ಸಾವು ತಪ್ಪದು ತನಗೆ ಕಾಮನ ಡಾವರವು ಘನ (ಕುವ್ಯಾವಿ. ೨-೨೭) ; ರಕ್ತಬೀಜಜನ ಡಾವರಕೆ ಬೆಚ್ಚದಿರಿ (ಅಂಬಿಕಾ. ೩೮-೯). ೪. ತೀವ್ರತೆ ; ರಭಸ ; ಅತಿಶಯ : ಬತ್ತಿದ ಬತ್ತು ಪೃಥ್ವಿಯ ಕೊಟ ಅವ್ವುದಿನ ದ್ರವದಿಂದ ಮಸ್ತಕ ಒಡೆದುದಲ್ಲದೆ ಉಷ್ಣದ ಡಾವರಕ್ಕೆ ಬೆಂಕಿಯ ಬೇಗೆಗೆ ಮಸ್ತಕ ಒಡೆದುದುಂಟೇ (ಬೋಳಮೂ. ೨೮೦-೪೭); ಉಗಿದು ಹಾಯ್ಕುವ ಖಳನ ನಿಡುದೋಳುಗಳು ಬಳಲಿದವಳ್ಳೆ ಹೊಯ್ದವು ಧಗೆಯ ಡಾವರವಾಯ್ತು ಬಹಳ ಸ್ವೇದಜಲ ಜಡಿಯೆ (ಕುವ್ಯಾಸ. ೦೫-೨). ೫. ಕಾವು; ದಗೆ; ತಾಪ : ಉರಿಯ ಡಾವರವೆಳೆಯ ಬಾಳೆಯ ಬೆರಸುವಂತಿರೆ

ಡಾಯಕಿವರನ ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು (ಕುವ್ಯಾದ್ರೋ. ೭-೧೧) ; ಬಿಸಿಲಿನ ಡಾವರವು ಅತಿಯಾಗಿದ್ದರೂ ಆತನು ತಲೆಗೆ ಟೋಪಿಯನ್ನೂ ಹಾಕಿರಲಿಲ್ಲ (ಕಾನೂರು. ೧). ೬. ಪ್ರತಾಪ ; ಶಕ್ತಿ ; ಸಾಮರ್ಥ್ಯ : ಆ ವಿವಿಧ ಮಂತ್ರಾಸ್ತ್ರವನು ಶತಸಾವಿರವನಾ ಬ್ರಹ್ಮದಂಡದ ಡಾ[ಪಾಠಾಂ. ಢಾ]ವರದಲೇ ಗೆಲಿದನೊಬ್ಬ ವಸಿಷ್ಠ ಮುನಿಯೆಂದ (ಕುವ್ಯಾಆ. ೧೧-೪೩) : ಆವುದಂತರ ವನಕಳಭಕ್ಕೆರಾವತಕೆ ಮಾರ್ಮು ಥಾವು ದ್ರೋಣನ ಡಾವರಕೆ ಪಾಂಚಾಲನ್ಯೆಸಟಿವನು (ಕುವ್ಯಾಭೀ. ೮-೩೨). ೭. ಗದ್ದಲ ; ಗಲಿಬಿಲಿ ; ಸಡಗರ : ಧೂರ್ಜಟಿಯ ಡಾವರದ ಡಮರಧ್ವನಿಯೊ ವಿಲಯದ ಬಲಿಸಿಡಿಲ ಬೊಬ್ಬಾಟವೋ (ಕುವ್ಯಾಕ. ೨೧-೧೬). ೮. ಬಯಕೆ ; ಉತ್ಕಟವಾದ ಇಚ್ಛೆ : ಮಹಾವಾರ್ಧಿಜಲವ ನೊಂದೇ ಸಾರಿ ಸುಟಿಗೊಂಬ ಡಾವರದೊಳಿದ್ದ ವಡಬಾಗ್ನಿಯೋ . . . . ಎಂದೇಬೊಲಾದುದು ಧನಂಜಯನ ಪಾವಕಾಸ್ತ್ರಂ (ಜೈಮಿಭಾ. ೧೩-೧೧) : ಆಳ್ದನೂಟಿಗಮನಿತುಮಂ ತಾನೊರ್ವನೆ ಗೆಯ್ವ ಡಾವರದಿಂ (ಚಿಕವಂ: ೮೫-೨೧). ೯. ಭಯಂಕರವಾದುದು ; ಭೀಷಣತೆ ; ಕರಾಳತೆ : ಆವ ಕೌಳಿಕಮಂತ್ರತಂತ್ರದ ಡಾವರದ ಡೊಳ್ಳಾಸವಿಕ್ಕಿದ ದೀವಸದ ಬೇಳುವೆಯ ನೇನೆಂಬೆನು (ಕುವ್ಯಾಸ. ೧೩-೬೧) ; ಜಲಧಿ ಜಲಧಿಯ ಹಳಚಲಗಿದವ್ವಳಿಪ ವಾದ್ಯಧ್ವನಿಯ ಡಾವರ ಸೆಳೆದುದಸುರರ ಧುರದ ಧೈರ್ಯವನು (ಕುವ್ಯಾಅ. ೧೨-೦೨). ೧೦. ಆವರಿಸುವಿಕೆ; ಸುತ್ತಲೂ ವ್ಯಾಪಿಸುವಿಕೆ. 'ಡಾವರಿಸು' ಪರಾ. ಡಾವರಿ : ೪. ಅತ್ತಲರ್ಜುನನುರಿಯ ಡಾವರಿಯನು[ಪಾಠಾಂ. ಡಾವರವನು]ಭಂಗಿಸಿದನೆಚ್ಚು ನಾರಾಯಣಾಸ್ತ್ರದೊಳು (ಜೈಮಿಭಾ. ೮-೪೫). ಡಾವುರ: ೮. "ಡಾವುರವಮನಲಾಪೇಕ್ಷೆಯು" (ಭಾರನಿ. ೩೨). ಡಾಹರ: ೬. ಡಾಹರದೊಳೆಜಗಿದೆಕ್ಕಲನದಟುವಂ ಮುಟಿಯೆ ನೇಹದಿಂ ಹರಿ ತನ್ನ ಕುವರಿಯಂ ಕೊಡೆ (ಅಂಗಪು. ೧-೦೬).ದಾವರ : ೧೧. ಬಾಯಾರಿಕೆ ; ದಾಹ; ನೀರಡಿಕೆ; ಸೇದೆ : ಬಳಸಿ ಬಂದಿಹ ನಮಗೆ ಇಷ್ಟು ದಾವರವಾಗೆ ಏರಿಬಳುವವನಿಗೆಷ್ಟು ದಾವರವೊ (ಅರುಣ. ೩೯-೨೧); ಉಪ್ಪು ತಿಂದಷ್ಟೂ ದಾವರವಾಗಿ ಒಣಗಿ ಹೋದೀಯೇ, ಬೆಲ್ಲವೇ ತಿನ್ನು (ಕಥಾಮಂ. IV,೪೨). 'ಡವರ' ಪರಾ. [ <ಸಂ. ಡಾಮರ ]

**ಡಾವರಿ** 'ಡಾವರ' ನೋ.

**ಡಾವರಿಗ** (ನಾ). ೧. ಕೊಳ್ಳೆಹೊಡೆಯುವವನಂ ; ದಂಗೆಮಾಡು ವವನು; ಸೂರೆಕಾರ ; ದರೋಡೆಗಾರ : ಅಟಿವಿನ ಗರ್ವದಿಂದಿಳಿಸದೀ ತ್ರಿಜಗಂಗಳನೊತ್ತಿ ಮೋಹವೆಂಬಟಿಕೆಯ ಸಂದ ಡಾವರಿಗನುಂ ಪಗೆ ತನ್ನೊಳಗಿರ್ದೊಡೆಂತುಮೇತೆಬಿದೊಳಮೊಳ್ಪೆಕೆಯ್ಗುಮೆ (ಜೀವಸಂ. ೦೫೮-೦೬); ಡೊಂಬಿಗರ ಡಾವರಿಗರಿವದಿರ ತಿಂಬೆನೀಗಳೆ (ಕುವ್ಯಾಸ. ೦೫-೩೫). ೨. ಶೂರ; ಸಮರ್ಥ; ವೀರ : ಕಂಸನಾನೆಯನಸುಬಡಿದ ಗಡ ಮಲ್ಲರನು ಮರ್ದಿಸಿದನೇ ಡೊಳ್ಳಾಸದಲಿ ಡಾವರಿಗನಹನೆಂದ (ಕುವ್ಯಾಸ. ೧೧-೧೭). ೩. ಗದ್ದಲಮಾಡುವವನಂ ; ಕೋಲಾಹಲವನ್ನುಂಟು ಮಾಡುವವನಂ ; ಆರ್ಭಟಿಸುವವನು : (ಕ). [ ಡಾವರ + -ಇಗ ]

**ಡಾವರಿಗತನ** (ನಾ). ಸಾಮರ್ಥ್ಯ ; ಶೌರ್ಯ ; ಪರಾಕ್ರಮ : ಕರ್ಣ ಗಳಹದಿರು ಡಾವರಿಗತನವಾರ ಕೂಡೆ ವೃಥಾ ವಿಲಾಸಿಗಳೆಲವೊ ಸುಭಟರೆ ನೀವು (ಕುವ್ಯಾದ್ರೋ. ೦೩-೨೩). [ ಡಾವರಿಗ + -ತನ ]

**ಡಾವರಿಗವಿದ್ಯೆ** (ನಾ). ಕೊಳ್ಳೆಹೊಡೆಯುವುದು ; ಲೂಟಿ ; ಸೂರೆ : ಆವ ಸೇರಿಕೆ ಜಪಕೆ ಚಾಪಶರಾವಳಿಗೆ ಶಮೆ ದಮೆಗೆ ಖಡ್ಗಕೆ . . . ಆವುದಿದರಭಿಧಾನ ತಪವೋ ಡಾವರಿಗವಿದ್ಯಾಸಮಾಧಿಯೊ ನೀವಿದೆಂತಹ ಋಷಿಗಳು (ಕುವ್ಯಾಅ. ೪-೪೫). [ ಡಾವರಿಗ + ವಿದ್ಯೆ ]

**ಡಾವರಿಸು, ಢಾವರಿಸಂ, ದಾವರಿಸು** (ಕ್ರಿ). ೧. ಸುತ್ತು ; ತಿರುಗಾಡು ; ತ್ವರೆಯಿಂದ ಆಚೀಚೆಗೆ ಚಲಿಸು ; ರಭಸದಿಂದ ಮುನ್ನುಗ್ಗು : ರಥಿಕರ್ ಕಡುಪಿಂ ರಥಂಗಳಿಂ ಡಾವರಿಸುತ್ತೆ (ದಶಕು. ೭-೭೩) ; ಧುರಧೀರಂ ಗುಂಡದಂಡಾಧಿಪನ ನಿಜಯಶಃಕಾಂತೆ . . . ದಿಶಾಚಕ್ರದೊಳ್ ಡಾವರಿಸಲ್ (ಎಕ. V, ಬೇಲೂರು. ೩-೭೯; 1397) ; ತೀವಿ ತೆಗೆದನು ವಜ್ರಶರದಲಿ ಡಾವರಿಸಿದನು ಕಳನೊಳು (ಕುವ್ಯಾದ್ರೋ. ೧೧-೨೮) ; ನೂಟಾನೆಯಲಿ ಡಾವರಿಸಿದನು ಧರ್ಮಜನ ದಳದಲಿ ಧೀರ ಕುರುರಾಯ (ಕುವ್ಯಾಗ. ೨-೩೫); ನೆಲ ಹಟಿಯೆ ಹರಿದವು ತೇರುಗಳು ತೇರವದ ತೋಳುಗಳ ಉರುಕೃಪಾಣದ ದಂತಿಗಳು ಡಾವರಿಸಿದವು (ತೊರರಾ. ೫-೫-೧೭). ೨. ಬಾಯಾರಿಕೆಯಾಗು: ನರನ ತೇರಿನ ಕುದುರೆಗಳು ಡಾವರಿಸಿದುವು ಡಗೆಹೊಯ್ದು ಮಿಗೆ ದಳ್ಳುರಿಯ ಸಸಿಯಂತಾದನರ್ಜುನದೇವ ನಿಮಿಷದಲಿ (ಕುವ್ಯಾಭೀ. ೬-೩೪) : ತೀವಿದ ಪಾಲ್ಗೊಲೆಯಂ ತಳಿರ್ವಾಯಿಂ ಡಾವರಿಸುತ ಕರ್ಚುವ ಕಂದನ ಸದ್ಭಾವವನೀಕ್ಷಿಸದಾಕೆಯ ಕಣ್ಗಳ್ ಪೀಲಿಯ ಕಣ್ಣ್ಗೆಸೆ (ಜಯುಕಾ. ೨-೩೭). ೩. ಹಬ್ಬು; ಆವರಿಸಂ ; ವ್ಯಾಪಿಸು : ಅವಿರಳಾಸ್ತ್ರಾನೀಕ ಡಾವರಿಸಿದವು ದಿಗುತಟವ (ಕುವ್ಯಾಭೀ. ೮-೩೬); ಉರಿಯ ಕರಡಿಗೆಯಂತೆ ಶಿಖಿ ಡಾ[ಪಾಠಾಂ. ಸಿಡಿದಾ]ವರಿಸಿತಬುಜಭವಾಂಡಭವನವನು (ತೊರರಾ. ೬-೪-೩೨); ವಿಷಜ್ವಾಲೆ ಮಿಗೆ ಡಾವರಿಸಿತು . . . ಪರಬಲದೊಳು (ಜೈಮಿಭಾ. ೨೪-೩೧) ; ಆತನ ಕೀರ್ತಿಯು ದಶದಿಕ್ಕುಗಳಲ್ಲಿ ಡಾವರಿಸುತ್ತಿತ್ತು (ಕವೀರ. ೦೨೦). ೪. ಚುಚ್ಚು ; ತಿವಿ; ಹೊಡೆ; ಹಿಂಸಿಸು; ನೋಯಿಸಂ: ನೀವು ಕಂಡಿರೆ ನಾಭಿ ಜಂಘೆಗೆ ಡಾವರಿಸಿದನು ಹಲವು ಬಾರಿ ಜಯಾವಲಂಬನವೆಂತು ಕೃಪೆಮಾಡೆಂದನಾ ಪಾರ್ಥ (ಕುವ್ಯಾಗ. ೭-೪೩). ೫. ಉರಿ ; ಪ್ರಜ್ವಲಿಸು : ರಘಳದ ಡಗೆ ಡಾವರಿಸೆ ಹೊಕ್ಕರು ಕೊಳನ (ತೊರರಾ. ೨-೪-೨೨) : ಭುಗಿಲ್ಭುಗಿಲ್ಭುಗಿಲೆಂದು ಡಾವರಿಸೆ . . . ಎಲ್ಲರಂ ದಹಿಸತೊಡಗಿದುದು ದಳ್ಳುರಿ (ಜೈಮಿಭಾ. ೮-೩೯): ಕಂಬನಿಯ ಕಡಲೊಳಗೆ ಡಾವರಿಪ ವಡಬಶಿಖಿ (ಜೈಮಿಭಾ. ೦೩-೫೯). ೬. ಅತಿಯಾಗಿ ಬಯಸು ; ಉತ್ಕಟವಾಗಿ ಆಸೆಪಡು ; ಆಸೆಯಿಂದ ಹಾತೊರೆ : ವಿಷಯವ ಡಾವರಿಸುವವ ಸ್ತುತಿನಿಂದೆಯ ಬಲ್ಲನೆ (ಸರ್ವವ. ೩೫-೧೮೮) ; ಆವರಿಸುವ ಮನ ಭಕ್ತಿಗೆ ಡಾವರಿಸುವ ಮನ ಶಿವಾರ್ಚನೆಗೆ . . . ದೊರಕಿದೊಡಾವುದಸಾಧ್ಯಂ (ಶಂಕಕಂ. ೨೦). ೭. ಆರ್ಭಟಿಸು ; ಅಬ್ಬರಿಸಂ : ಕಡುಲುಳಿ ಮಸಗಿ ಡಾವರಿಸಿ . . . ತಾಗಿದರು (ಕುವ್ಯಾಸ. ೨-೦೦೩) ; ಪಾವಿನಂತಾವಿನಂತಡಿಗಡಿಗೆ ಮೊರೆದೆದ್ದು ಡಾವರಿಸಿ ಸೀವರಿಸಿ ಮನೆಗೆಲಸವಂ ಗೆಯ್ಯದಾ ವನಿತೆ ಸಾವನಿತೆ ಲೇಸು (ಜೈಮಿಭಾ. ೫-೫೪): "ಹಟಮಾರಿತನ ಮಾಡು; ಮೊಂಡಾಟಮಾಡು"(ಪ್ರಭಣ). ಢಾವರಿಸು: ೬. ಆವುದಟಿ ದೆಸೆಯಿಂದ ಮನವಿದು ಢಾವರಿಸುತಿಹುದದು ಕಣಾ ಭವಧಾ ವತಿಗೆ ಕಾರಣವು (ಸ್ವರೂಪಾ. ೧-೪). ದಾವರಿಸು : ೪. ಆನೊಲಿದು ಬಂದರೆ ನಿಮ್ಮ ಬಿಟುನುಡಿಯಲಗಿನಲಿ ದಾ[ಪಾಠಾಂ. ಡಾ]ವರಿಸಿದಿರಿ ಡೊಳ್ಳಾಸವಿದ್ಯೆ ಯಲಿ (ತೊರರಾ. ೩-೪-೨೦). ೮. ನೋಯು; ಹಿಂಸೆಗೊಳ್ಳು; ಯಾತನೆ ಯನ್ನನುಭವಿಸು : ಆತುರದಲ್ಲಿ ಕಳವಳಿಸಿ ವ್ಯಾಕುಲದಲ್ಲಿ ದಾವರಿಸು ತಿಪ್ಪುದೀ ಮನವು (ವಚಶಾ. II, ೪೪೯) ; ಮಗ್ಗಲದ ಮರಿಯಳೀ ಯೇಸು ವಿಗೆ ಮನಸೋತು . . . ಬೆಂದು ಮನನೊಂದು ಭುಗಿಭುಗಿಲ್ಲ ಕಾವರಕೆ ದಾವರಿಸಿ (ಗೊಲ್ಗೊಥಾ. ೩-೭೧). 'ಡವರಿಸು' ಪರಾ.
[ ಡಾವರ + - ಇಸು₃ ]

**ಡಾವಳಿ** 'ಧಾವಳಿ' ನೋ.

**ಡಾವು, ಡಾವ್, ಡಾವೆ** (ನಾ). ೧. ಹೊಟ್ಟೆಕಿಚ್ಚು ; ಡಂಕಂ ; ದ್ವೇಷ ; ವೈರ : ಆ ಹಾವು ಡಾವು ಇಟ್ಟುಕೊಂಡು ಒಂದು ವರ್ಷದ ನಂತರ ಅವನನ್ನು ಕಚ್ಚಿದೆ (ರೂಢಿ). ೨. ಕುಸ್ತಿಯಲ್ಲಿ ಒಂದು ಬಗೆಯ ಹಿಡಿತ : ಇಂತಹ ಹಿಡಿತಗಳಿಗೆ ಭಾರತ ಪ್ರತಿ ಡಾವು ಮಾಡುವಷ್ಟು ಸಾಧನೆ ಪಡೆದಿದೆ (ಎಚ್ಕಸಾ. ೦೪೮). ೩. ಆಟ ; ಕುಸ್ತಿಯಾಟ : 'ಡಾವುಪೇಚು' ಪರಾ. ೪. ಹಂಚಿಕೆ ; ಉಪಾಯ ; ಯುಕ್ತಿ : ಮುದ್ದಾಂ ಮಳ್ಳತನವನು

ಪ್ರದರ್ಶಿಸುವ ಡಾವಿನಿಂದ ನಾನೂ . . . ಅವನ ತಲೆ ಚಿಟ್ಟು ಹಿಡಿಸುವಂತೆ ಬಾತಮಿ ಒಪ್ಪಿಸಿದ್ದೆ (ದೀಪಹ. II, ೦೪). ಡಾವ್ : ೧. ಸಾಹೇಬರ ಡಾವ್ ಶ್ಯಾಮರಾಯರಿಗೆ ಹೋಳೆದಿತ್ತು (ದೀಪಹ. II ೩೦). ಡಾವೆ : ೧. ಕಾಡೊಳಂ ಮರೆಗೊಂಡು ತಸ್ಕರರ್ ಬಳಿಕಿಂದು ಡಾವೆಯಿಂ ಪರಶುಧೀರಧರರಿಲ್ಲದಿಹ ಸಮಯದೊಳ್ ಮೋವಿತಿನ್ನಾರ್ ಕಾವರೆಮ್ಮನೆಂದೊಳಗೊಳಗೆ (ಪರಶು. ೩೭-೦೪). [ ←ಹಿಂ. ಮರಾ. ಡಾವ್ ]

ಡಾವುತೀರಿಸು (ಕ್ರಿ). ಹಗೆತನವನ್ನು ಸಾಧಿಸಿಕೊಳ್ಳು ; ಪ್ರತೀಕಾರ ಕೊಳ್ಳು : (೩). [ ಡಾವು + ತೀರಿಸು ]

ಡಾವುಪೇಚು 'ಡಾವಪೇಚು' ನೋ.

ಡಾವುರ 'ಡಾವರ' ನೋ.

ಡಾವೆ 'ಡಾವು' ನೋ.

ಡಾಶೇರು (ನಾ). ಒಂದಂ ತೂಕದ ಅಳತೆ ; ಎರಡೂವರೆ ಸೇರು ; ಅಡೀಸೇರು : ವಂದು ಮಣುವಿಂಗೆ ದಡಯ ನಾಲ್ಕುಂ ಪಂಚೇರು ಥಂದ ದೊಳೆಂಟು ಡಾಶೇರು ಷೋಡಶಮಕ್ಕುಂ (ಭಾಸ್ಕರ. ೭೫-೭).

[ ಡಾ$_0$ (P ←ಹಿಂ. ಥಾಈ) + ಶೇರು$_1$ (<ಸೇರು$_2$) ]

ಡಾಹ, ದಾವು$_1$ (ನಾ). ೧. ಸುಡುವಿಕೆ; ದಹಿಸುವಿಕೆ : ತೋಟಿ ಯಂತೆ ಮಳೆಮಂ ತೋಟಿ ಬೆರ್ಚಿಸದೆ ಕಿರ್ಚಿನಂತೆ ಅಡಕಮಂ ತೋಟಿ ನಂಬಿಸದೆ ದಾಟಿಯಂತೆ ಡಾಹಮಂ ಮಾಡಿ ಕಿಡಿಸದೆ (ಧರ್ಮಾಮೃ. ೫-೯೯). ೨. ಸೆಕೆ ; ದಗೆ; ತಾಪ : ಮನುಷ್ಯ ಲೋಕದೊಳಾದ ಸುಖಮಲ್ಲಂ ಡಾ[ಪಾಠಾಂ. ದಾ]ಹಕ್ಕೆ ಶೀತಲಕ್ರಿಯೆಗೆಯ್ವಂತೆ ನೋವನಾಱಿಸುವ ಸುಖಂ ಅದು ಸುಖಮೆ (ಜೀವಸಂ. ೫೦-೩೪ ವ). ೩. ನೀರಡಿಕೆ ; ಬಾಯಾರಿಕೆ. ದಾವು$_1$ : ೨. ಬಿಸಿಲಿನ ದಾವು ತಗ್ಗಿತ್ತು (ಪಳಮ. ೨೦).

[ <ಪ್ರಾ. ಡಾಹ./ಸಂ. ದಾಹ ]

ಡಾಹರ 'ಡಾವರ' ನೋ.

ಡಾಹಿಣಿ 'ಡಾಕಿಣಿ' ನೋ.

ಡಾಹಿಸು (ಕ್ರಿ). ದಾಹಗೊಳ್ಳು ; ಅತಿಯಾದ ತಾಪದಿಂದ ಕೂಡಿರು ; ಉತ್ಕಟವಾಗಿ ಕುದಿ : ಮೋಹ ಮದ ಸಮೂಹದಿಂದ ಡಾ[ಪಾಠಾಂ. ದಾ]ಹಿಸುತ್ತ ಮಿರ್ದನಯ್ಯ ದೇಹದಿಚ್ಛೆ ಹೆಚ್ಚಿ ಮಚ್ಚರಕ್ಕೆ ವೇಳೆ ಯಾದನಯ್ಯ (ಹಂಪರ. ಹ. ೫೦೦-೨೦). [ ಡಾಹ + – ಇಸು$_3$ ]

ಡಾಳ್$_1$, ಡವಳ$_1$, ಡಾಲು$_{11}$, ಧವಳ, ಧಾಲು, ಧಾಳ್$_1$, ಧಾಳು (ನಾ). ೧. ಹೊಳಪು ; ಪ್ರಭೆ ; ಕಾಂತಿ : "ತೊಳಗು, ಬೆಳಗು . . . ಡಾಳಂ, ಪೊಗರ್, ತೊಳಪಂ, ಮಸೆ– ಈ ೧೪ ಕಾಂತಿ" (ಕಶಸಾ. ೦೧-೨೦೨) : "ಡಾಳ ಹಟಿ ಪೊಗರೆಂದೆನೆ ಕಳೆ ಪೊಳಪು . . . ಕಾಂತಿಯೆನಿಕ್ಕುಂ" (ಕವಿಕಂ. ೦೦೦) ; ವಪುರ್ವೆಳದುವಾಕೆಯ ಡಾಳಮನಾಂತ ದಿಟ್ಟಿಗಳ್ (ಕಬ್ಬಿಗಕಾ. ೩೩೦); ಕನಸಿನ ಸಿರಿ ಕಾಮುರ್ಗೆಳೊಡ್ಡಿನ ಚಿತ್ರುಂ ಸತಿಯರೊಲ್ಮೆ ಮಿಂಚಿನ ಡಾಳಂ ಜನ ಪತಿಯ ಕೂರ್ಮೆ ಯೆನಲಾತನೋಳಾಯ್ತು ಜನ ಸೌಖ್ಯಂ (ದಕಕು. ೫-೫೪) ; ವಿಸುನಿಯೋಲೆಯ ಡಾ[ಪಾಠಾಂ. ಧಾ]ಳ ಕದಪಿನೊಳೆಸೆಯೆ (ನಳಚ. ೩-೭); ವ್ಯಾಲೋಲ ಖಡ್ಗಗಳ ಡಾಳದಿಂ ಮೇಳದಿಂ . . . ಪಡೆ ಪಡೆಥಿನಿಂ ನಡೆದುದು (ಚಬಪು. ೪೭-೦೦). ೨. ಅಂದ ; ಚಂದ ; ಸೊಬಗು : "ಡಾಳಮನೆ ಲಾವಣ್ಯಂ" (ಭಾರನಿ. ೩೫) ; ಡಾಳದ ಕಣ್ಣ ನೀರ್ವನಿಗಳುಂ ಪೊಸಮುತ್ತು ಗಳುಂ ನಭೋಂತದೊಳ್ ಸಾಲಿಡಲ್ (ದಕಕು. ೦೨-೦೧೩) ; ತೋರಮೊಲೆ ಗಳ ಡಾಳದಲಿ ಮಣಿಹಾರ ಮೆಱೆಯಲು (ಜೀವಂಚ. ೮-೯); ಥಳಥಳಿಸುವೆಳ ವಿಮಾನ ಡಾಳವ ಗೆಲುವ ಕಂಗಳ (ಅಕ್ರೂಚ. ೪-೨೪). ೩. ರೀತಿ ; ಕ್ರಮ ; ಪದ್ಧತಿ ; ತರಹ : ಕಾಲದೇಶಾಗಮದ ನಿಗಮದ ಡಾಳವಱಿದೈಹಿಕಪರತ್ರ ವಿಟಾಳಿಸದೆ ನಡೆ ಕಂಡ (ಕುವ್ಯಾಸ. ೦೫-೬೨). ೪. ಕುಂದು ; ಹಾನಿ ; ಭಂಗ : ಅಜ್ಜಮುತ್ತರ ತೆಱದಿ ನಡತೆಗಳೆಜ್ಜವಿರದೊಪ್ಪದೊಲು ನಡೆತರು ತೆಜ್ಜ ಸಾಸಿರ ಬಿದ್ದು ಡಾಳಗಳಾದವವಕೀಗ (ಬಿಜ್ಜಪು. ೭೭-೦೭). ೫. ಉಜ್ಜಿ ಹೊಳಪುಗೊಳಿಸುವುದು. 'ಡಾಳವಿಡಿ' ಪರಾ. ೬. ತೋರಿಕೆ ; ಥಳುಕು ; ಠಕ್ಕು. 'ಡಾಳಿ' ಪರಾ. ೭. ಥಳುಕಿನವನು ; ಡಾಂಭಿಕ ; ಮೋಸಗಾರ; ವಂಚಕ: ಕುಡದೆ ಕಾಡುವವಂ ರಸಬೋನವೆತ್ತು ಮಾಕಾಳಿಗೆ ಡಾ[ಪಾಠಾಂ. ಕಾ, ಗಾ]ಳನಂ ನೆಗವು ಟಕ್ಕಿಪನಂ ತುಟಿ (ಲೀಲಾವ. ೨-೦೧೭) ; ಡಾಳಂಗಪ್ಪುಯಿಸಿದುದು ಬಿಡಾಳಕ್ಕಂ ಪಾಲ ಕಾಪನಿತ್ರವೋಲಾಯ್ತೆಂದೀ ಲೋಕ ಮುಲಿಯೆ ನೀತಿನುತಾಲೋಕನರಹಿತನಹಿತಚರಿತದೆ ನೆಗಟ್ದಂ (ಪಾರ್ಶ್ವಪು. ೩-೦೦೨). ಡವಳ$_1$ : ೭. ಢಾಳರನು ಡ[ಪಾಠಾಂ. ಥ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೦೦). ಡಾಲು$_1$: ೧ 'ಡಾಲುಹೊಡೆ' ಪರಾ. ಧವಳ : ಮೇಲಿನ 'ಕುವ್ಯಾಗ. ೫–೧೧'ರ ಪ್ರಯೋಗದ ಪಾಠಾಂತರವನ್ನು ನೋಡಿ. ಧಾಲು$_1$: ೮. [ಸಂಗೀತ] ದಾಟುಸ್ವರಗಳ ಪ್ರಯೋಗ : ಧಾಲು – ಸಪಾ, ಸಮಾ, ಸಗಾ, ಸರೀ ಎಂದು ಅನು ಕ್ರಮಿಸುವ ದಾಟುಸ್ವರಗಳ ಪ್ರಯೋಗ (ಸಂಗೀಹಂ. ೨೪). ಧಾಳ್$_1$: ೧. ಸರ್ವಾಂಗದೊಳ್ ಧಾಳಂ ನೆಟ್ಟನೆ ಪುಟ್ಟೆ ನಾಟ್ಯರಸದೊಳ್ ತೇಂಕಾಡು ವಂತಾಡಿದರ್ (ಪಾರ್ಶ್ವಪು. ೦೪-೦೩೯) ; ಎಳೆಯ ಮುತ್ತಿನ ಧಾಳವನು ಮುಕ್ಕುಳಿಸಿದಂಗಚ್ಛವಿಯ (ಕುವ್ಯಾಅ. ೬-೭೩) ; ಭ್ರೂಲತೆಯ ಲಾವಣ್ಯ ನಿಧಿಯ ವಿಶಾಲ ಭಾಳದ ಧಾಳದಲಿ (ನಿಥಾಗ. ೨-೦-೨೭); ಸುಲಿಪಲ್ಲ ಧಾಳದಿ ಕರ್ಣಕುಂಡಲದಿ (ಶಂಕದಾ. ೫-೭೭): ಚೆಲ್ವೆ ಕಂಗಳ ಧಾಳ (ಅಂಬಿಕಾ. ೩೪-೭೦). ೭. ಢಾಳರನು ಡ[ಪಾಠಾಂ. ಥ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೦೦). ೯. ಅಶುಚಿವಂತ ; ಶೀಲಗೇಡಿ (?) : ಖೂಳರಿಲ್ಲ ಜಾಣರುಂಟು ಗೆಲ್ವರಿಲ್ಲ ಒಲ್ವರುಂಟು ಧಾಳರಿಲ್ಲ ಶುಚಿಗಳುಂಟು ಹುಸಿವರಿಲ್ಲ ಸತ್ಯರುಂಟು (ಮಕರ. ಹ. ೨೨೦-೨೩). ೧೦. [ನಾಟ್ಯ] ಒಂದು ಬಗೆಯ ನೃತ್ಯ: ರೂಪು ರೇಖೆ ಧಾಪಣೆ ತೂಕವಣೆಯಂಕೆ ಝುಂಕೆ ಧಾಳ ಡಿಳ್ಳಾಯ ಚಂಡಣೆ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೭-೭೭ ವ). ಧಾಳು : ೧. ನೂರು ಬಣ್ಣದ ಹೊಳವನೊಳಗಾಂತು ಇದರ ತೆರವಿಂಥದೆನೆ ಮತ್ತೊಂದು ಧಾಳಿನಿಂದ ಕಂಗಳನು ಕೋರೈಸು ವಚ್ಚರಿಯ ಹೀರದಂತಿವನ ಬಗೆಗೆನ್ನ ಬಗೆಯಚ್ಚರಿಪುದು (ಗೋಕುನಿ. ೨೦-೨) : ಚಂದಕೆ ಮರುಳಾಗೆ ಕಣ್ಣ ಮುಚ್ಚಿಸಿತವ್ವ ನಿನ್ನ ಪರಿವಾರದ ಸುರರ ಧಾಳು (ಹಂಸದ. ೦೭೫-೦೭).

ಡಾಳಾಗು, ಧಾಳವಾಗು, ಧಾಳಾಗು = ೧. ಉಜ್ವಲವಾಗು ; ಪ್ರಕಾಶ ಮಾನವಾಗು ; ಚೆನ್ನಾಗಿ ಪ್ರಕಾಶಿಸು; ಪ್ರಜ್ವಲಿಸು: ದೀವಿಗೆಯು ಡಾಳಾಗಿ ಉರಿಯುತ್ತಿರಲಿಕ್ಕೆ ಬೇಕು (ಮುಂಬಯಿ. ೫-೦೭೨) ; ಬರಬರುತ್ತ ಆ ಬೆಳಕು ಧಾಳವಾಗಿ ಖಿಂಡಿಯಿಂದ ಹೊರಚೆಲ್ಲಿ (ಗೀಜುಗ. ೦೦) ; ಅವನ ಕಣ್ಣಲ್ಲಿ ಸತ್ಯದ, ಬಂಧುತ್ವದ ದಿವ್ಯಜ್ಯೋತಿಯೊಂದು 'ಧಾಳಾಗಿ' ಉರಿಯುತ್ತಿತ್ತು (ಬರಹಾ. ೯೪); ವಿಶ್ವವಿದ್ಯಾನಿಲಯದ ಕೋಣೆಯಲ್ಲಿ ಇನ್ನೂ ದೀಪ ಧಾಳಾಗಿ ಉರಿಯುತ್ತಿದ್ದುದು . . . ಕಾಣುತ್ತಿತ್ತು (ದೀಪಹ. II, ೦೦೬). ೨. ಎದ್ದು ಕಾಣು; ಸುಸ್ಪಷ್ಟವಾಗು : ಭವ್ಯಮಂದಿರಗಳು ಮದರಾಸಿನಲ್ಲಿ ಬೀಚಿನ ಹತ್ತಿರವೇ ಧಾಳವಾಗಿ ಕಾಣುತ್ತಿವೆ (ಹೂಅರ. ೦೭) ; ಕೊರಳಿಗೆ ವಿಭೂತಿ ಯನ್ನು ಬಳಿದು ಧಾಳವಾಗಿ ಕುಂಕುಮ ಲೇಪಿಸಿದರು (ಮತ್ತಮು. ೩೫೭).

[ ದೇ.॥ ತೆಲು. ಡಾಲ./ಮರಾ. ಧಾಳ ]

ಡಾಳ್$_2$ 'ಡಾಲು$_2$' ನೋ.

ಡಾಳ್$_3$ (ನಾ). (ಚಾಮರ ಮೊದಲಾದವನ್ನು) ಬೀಸುವಿಕೆ ; ಗಾಳಿ ಹಾಕುವಿಕೆ.

ಡಾಳಹಾಕು = ಬೀಸು ; ಇಕ್ಕು : ಡಾಳಹಾಕುವ ಚಾಮರದ ಪೊಡೆವ ಡೌಡೆಯ (ಹಮ್ಮೀರ. ೩-೩೩ ವ).

[ <ಪ್ರಾ. ಢಾಲ ]

**ಡಾಳಕ, ಢಾಳಕ** (ನಾ). ೧. ತೋರಿಕೆಯ ನಡೆನುಡಿಯುಳ್ಳವನು ; ಡಾಂಭಿಕ ; ಮೋಸಗಾರ : ಬೋಳೆಯನೆಂದು ನಂಬಬೇಡ ಡಾ[ಪಾಠಾಂ. ಢಾ]ಳಕನವನು ಜಗದ ಬಿನ್ನಾಣಿ (ಮಹಾದೇ. ೫. ೦೦೯-೨೪೭) : ನೆಟಿ ಡಾಳಕನಂ ತಗುಳ್ದು ಕೂರ್ತಂಗಜಕೇಳಿಯೊಳ್ ತೊಡರ್ದು (ಮನ್ಮವಿ. ೭-೫) ; ಮಾಲೆಯನೊಬ್ಬಗಿಕ್ಕಿದಳೆಂದರಾ ಹೆಣ್ಣ ಮೇಲಾಸೆ ನೃ ಪ ಗಾ ಗ ದೆಂ ದು ಡಾಳಕನಾ ಮಂತ್ರಿ ಮತ್ತೊಂದು ತಂತ್ರದಿ ಚಾಳಿಸಿ ಮಡಿದನೇನೆಂಬೆ (ಭರತ. ೫೭-೫). ೨. ಕಪಟ ; ವಂಚನೆ ; ಮೋಸ. 'ಡಾಳಕವಂತ' ಪರಾ. **ಢಾಳಕ :** ೧. ಢಾಳಕರಿಗರ್ಥಾರ್ಥಿಗಳಿಗೆ ಪೇಳದಿರನುಭವಾಮೃತವ (ಅಮೃತ. ೧೦-೨). ೨. ನಿರುದಯವು ನಿಷ್ಠುರವು ದುರುಳತ್ವ ಢಾಳಕವು (ಸುಸಾರ. ೦೨-೨). [ ಡಾಳ್$_1$ + – ಕ$_2$ ]

**ಡಾಳಕತನ, ಢಾಳಕತನ** (ನಾ). ಥಳುಕು ; ವಂಚನೆ ; ಮೋಸ : ಕಾಳಗ ಕಿದಿರಾಗಿ ನಿಲ್ಲಲಾಱದೆ ಚಣ್ಣ ಡಾಳಕತನದೊಳೋಡುವನು (ಪ್ರಾಕೃತ. ೧೨-೫೦). **ಢಾಳಕತನ :** ನಾವು ನಮ್ಮಯ ಸೇವಕಾಂಗದ ಭಾವದಿಂದಿರ ಬೇಕೆನುತ ನಾನಾ ವಿಧದ ಢಾಳಕತನಂಗಳ ನುಡಿದನಲ್ಲಮನು (ಪ್ರಭುಲಿ. ೫-೫೭) ; ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಢಾಳಕತನದಿಂ ಢಾಳಕಿಯ ದಿಟ ಮಾಯೆ (ಯೋಗಾಂವಿ. ೨-೫೩) ; ಠಕ್ಕು ಢಾಳಕತನ ಬಜುಬೋಸರಣೆ ಬೇಳಕ್ಕೆ ವೈಶಿಕಗಳೆಂಬಿವಕೆ ಸಿಕ್ಕುವರೇ ಕೋವಿದರು (ಕುರಾಸಾಂ. ೨೮-೭೦). [ಡಾಳಕ + – ತನ ]

**ಡಾಳಕವಂತ** (ನಾ). ತೋರಿಕೆಯ ನಡೆನುಡಿಯುಳ್ಳವನು ; ಮೋಸಗಾರ ; ವಂಚಕ : ನೇಣು ಕೊಂದಿತ್ತಂದಾ ದಾಯಗಾರಿಕೆಯಲ್ಲಿ ಹೋಹ ದರ್ಶನ ಡಾಳಕವಂತಂಗೆ (ಸರ್ವವ. ೦೩೦-೭೭೦). [ ಡಾಳಕ + – ವಂತ ]

**ಡಾಳಕಿ, ಢಾಳಕಿ** (ನಾ). ಗಯ್ಯಾಳಿ ; ಮೋಸಗಾತಿ : ಸಗ್ಗಂಬಡೆದು ಬಂದ ಪ್ರತ್ಯಕ್ಷವಿಲ್ಲೆನಬಹುದೆ ಈ ಡಾಳಕಿ (ಸಮ್ಯಕ್ತ್ವಾ. ೪-೭೫). **ಢಾಳಕಿ :** ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಢಾಳಕತನದಿಂಢಾಳಕಿಯ ದಿಟ ಮಾಯೆ (ಯೋಗಾಂವಿ. ೨-೫೩). [ ಡಾಳಕ + – ಇ$_2$ ]

**ಡಾಳಯಿಸು$_1$**, ಡಾಳಯ್ಸು, ಡಾಳವಿಸು, ಡಾಳಿಸು$_1$, ಡಾಳ್ಯೈಸು$_1$, ಢಾಳವಿಸು, ಢಾಳಿಸು$_1$, ಢಾಳ್ಯೈಸು (ಕ್ರಿ). ೧. ಮಿಂಚು ; ಹೊಳೆ ; ಮಿನುಗು ; ಥಳಥಳಿಸು. **ಡಾಳಯ್ಸು :** ೧. ಕದಪುಗಳು ನಿರ್ಮಳವೊದಗಿ ಡಾಳಯ್ಸು[ಪಾಠಾಂ. ಢಾಳ್ಯೈಸು]ತಿಪ್ಪುವು ಲೋಲಲೋಚನೆಯ (ಬಸವು. ೪-೨೩). **ಡಾಳವಿಸು :** ೧. ಡಾ[ಪಾಠಾಂ. ಢಾ]ಳವಿಪ ಸುಲಿಪಲ್ ಮುಗುಳ್ನಗೆ ಮೇಳವಿಸುವ ಮುಖಪ್ರಸನ್ನತೆ (ಬಸವು. ೩-೨೭). **ಡಾಳಿಸು$_1$ :** ೧. ನೀಲದ ಸರ ಮಾಣಿಕದ ಕುಚ್ಚು ವಜ್ರದ ಮೇಲುಗೊಂಚಲು ವೈಡೂರ್ಯ ಡಾಳಿಸುತಿಹ ಬಲು ಪಸರದಂಗಡಿಗಳು ಸಾಲುಗೊಂಡೆಸೆದುವು (ಕಂನವಿ. ೩-೬೮) ; ಲೀಲೆಯಿಂ ನರಸಿಂಹನಂತ್ಯದಿದ ರತ್ನ ಡಾಳಿಪೊಲಗದ ಚಾವಡಿಗೆ (ಕಂನವಿ. ೧೦-೦೨೫) ; ಭಾಸುರ ವೇದಮಾತೆ ಗಾಯತ್ರಿ ಡಾಳಿಸೆ ತಾಳ್ದು (ಕುಮಾಪು. ೦-೭೦). **ಡಾಳ್ಯೈಸು$_1$ :** ೧. ಕದಪುಗಳು . . . ಡಾಳ್ಯೈಸು[ಪಾಠಾಂ. ಡಾಳಯ್ಸು, ಢಾಳ್ಯೈಸು]ತಿಪ್ಪವು ಲೋಲಲೋಚನೆಯ (ಬಸವು. ೪-೨೩); ಎಳಲಿಟ್ಟು ಡಾಳ್ಯೈಸುತಿಹ ಹಾರವೆಲ್ಲವುಂ ಸಂತೋಷದಿಂ ಪರಿದು ಪಸರಿಸಲು (ವೀರ್ಶೈಪು. ೩-೦೫-೭). **ಢಾಳವಿಸು:** ೧. ಢಾ[ಪಾಠಾಂ. ಡಾ]ಳವಿಪ ಸುಲಿಪಲ್ ಮುಗುಳ್ನಗೆ ಮೇಳವಿಸುವ ಮುಖ ಪ್ರಸನ್ನತೆ (ಬಸವು. ೩-೨೭). **ಢಾಳಿಸು$_1$:** ೧. ಶಾಲಿಯ ತೆರೆಯ ತಟ್ಟುಚ್ಚಿ ದೀಪದ ಕಾಂತಿ ಢಾಳಿಸುವಂತೆ ಲೋಕದೊಳು ಆ ಲಲಿತಾಂಗನ ತನುಕಾಂತಿ ಪೊದೆದದುಕೂಲದ ಹೊಱಗೆ ರಂಜಿಸಿತು (ಭರತ. ೦-೪೨) ; ಮೇಲಿಪ್ಪ ಚಿನ್ನದ ಕಳಶದಿಂ ಗೋಪುರ ಢಾಳಿಸಿ ತುಡು ಕಿತಂಬರವ (ಕಂನವಿ. ೭-೮೪). ೨. ಪ್ರಕಾಶಗೊಳಿಸು; ಹೊಳಪುಮಾಡು; ಬೆಳಗಿಸು : ಬಾಲಶಶಾಂಕನಂದದ ಪುಲಿಯುಗುರನು ಢಾಳಿಪ ಬಂದಿ ರಂಜಿಸಿತು (ಅಂಜನ. ೪-೪೪). ೩. ಉಜ್ಜಿ ಹರಿತವಾಗಿಸು ; ಮಸೆ ; ಸಾಣೆಹಿಡಿ : ಕುಂತದ ಧಾರೆಗಳ ಢಾಳಿಸುವ ನೆಟಿ ಸೊಪ್ಪಾದ ಹಿಲುಕಿನ ಗಱಿಯ ಕೀಲಿಸುವ . . . ವೀರಭಟರೊಪ್ಪಿದರು (ಕುಮ್ವಾಘ. ೫-೩೮). **ಢಾಳ್ಯೈಸು :** ೧. ನೀಲಗಿರಿಯೊಳಗಾಡುವ ಶಿಖಿಗಳೆರಡಾಲಿಂಗಿಸಲು ಭೂಮಿಯ ಢಾಳ್ಯೈಸುತಡರ್ದುರಿಗಳಿಂ ನಕ್ಷತ್ರಮಾಲೆ ಪ ಗ ಲೊ ಳ್ ತೋರ್ಪುದು (ಕ್ಕೈಪ. ೮೯-೩). [ ಡಾಳ್$_1$ + – ಇಸು$_3$ ]

**ಡಾಳಯಿಸು$_2$** 'ಡಾಳಿಸು$_2$' ನೋ.

**ಡಾಳಯ್ಸು** 'ಡಾಳಯಿಸು$_1$' ನೋ.

**ಡಾಳವಿಡಿ** (ಕ್ರಿ). ಉಜ್ಜಿ ಬೆಳಗಿಸು ; ಮೆರುಗುಕೊಡು : ಬಗೆಗೊಳಿಪ ಡಾಳವಿಡಿದಿರ್ದ ಕಟ್ಟಾಣಿಮುತ್ತಿನ ಕಂಠಮಾಲೆ (ಸೌಂದಪು. ೪-೨೨).

[ ಡಾಳ್$_1$ + ಪಿಡಿ$_1$ ]

**ಡಾಳವಿಸು** 'ಡಾಳಯಿಸು$_1$' ನೋ.

**ಡಾಳಾಹಿ** (ಕ್ರಿ). ಹೊಳೆಯುವ ಮೈಯನ್ನುಳ್ಳ ಹಾವು; ಕೃಷ್ಣಸರ್ಪ (?) : ಮೊಲೆಪುತ್ತುಗಳ ಬಳಿಯೊಳು ಡಾಳಾಹಿ ಕಣ್ಗೊಳಿಸದೆಯವು ನಿಕ್ಷೇಪ ನೆಲೆಯೆಂದು ವಿಟರು ಸೆಳ್ಗುರ್ಗಳಿಂ ತೋ[ ತೋ ]ಡುವರೆಳಸಿ ಗಣಿಕೆಯರ ಕುಚವ (ಗೊಮ್ಮಟ. ೨-೯೩).

[ P ಇದು 'ಕಾಳಾಹಿ'ಯ ಅಪಲಿಖಿತವಿರಬಹುದು ]

**ಡಾಳಿ$_1$** (ನಾ). = ಡಾಳೆ : ಪ್ರಾಣೇಶನಂ ನೆರೆದಂತೆ ಕಳುಪಿ ತತ್ ಕಾಲರತಿ ಚಿಹ್ನಮಂ ಮತ್ತೊರ್ವನೊಳ್ ಪುಸಿದು ಡಾಳಿಯೊಲಿದಿಂತಿರ್ದಳು (ಹಬಪು. ೦೦-೭೪). [ ಡಾಳ್$_1$ + – ಇ$_2$ ]

**ಡಾಳಿ$_2$** 'ದಾಟಿ' ನೋ.

**ಡಾಳಿಂಬ** 'ದಾಳಿಂಬ' ನೋ.

**ಡಾಳಿಂಬೆ** 'ದಾಳಿಂಬ' ನೋ.

**ಡಾಳಿಂಬ್ರ** 'ದಾಳಿಂಬ' ನೋ.

**ಡಾಳಿಮ** 'ದಾಳಿಂಬ' ನೋ.

**ಡಾಳಿಸು$_1$** 'ಡಾಳಯಿಸು$_1$' ನೋ.

**ಡಾಳಿಸು$_2$**, ಡಾಳಯಿಸು$_2$, ಡಾಳ್ಯೈಸು$_2$, ಢಾಳಯಿಸು, ಢಾಳಿಸು$_2$ (ಕ್ರಿ). ೧. (ಚಾಮರ, ಬೀಸಣಿಗೆ ಮುಂತಾದುವನ್ನು) ಬೀಸು ; ಗಾಳಿ ಹಾಕು : ಅಂಗಜನೃಪಂಗೆ ಬನವೆಂಬಂಗನೆ ಡಾಳಿಸುವ ಚಾರುಚಾಮರಮ ದೆನಲ್ . . . ಎಸೆದುದಲ್ಲಿ ಪೂಗಮಹೀಜಂ (ಅಭಿಸ್ಯ. ೯-೦೩) ; ಚಕಚಕಿತಮಾಗಿ ಡಾಳಿಪ ಚಾಮರಂಗಳಿಂ (ಪದ್ಮಣ. ೩-೫೦) ; ಗಾಯತ್ರಿ ಸಾ ವಿ ತ್ರಿ ಯ ರು ರಂಜಿಸಿದರಾ ಮಹಾದೇವನೆಡಬಲದಲ್ಲಿ ಡಾಳಿಸುತೆ ಚಾಮರವನೆಸಕದಿಂದ (ಸೌಂದಪು. ೦-೫೫) ; ನೀ ಲ ಗಿ ರಿ ಯ ಮೇಲೆ ಮುಸುಕಿದ ಸಿತಮೇಘಜಾಲವೆಂದೆನೆ ಡಾಳಿಸುವ ಮೇಲುಚವರಗಳು ಮೆಱೆದುವು (ಕುರಾಸಾಂ. ೪೨-೪೪) ; ಬೆ ರ ಳ ಮುದ್ರಿಕೆಯ ಹೊಳಹು ದೊಳಯುತ ಶುಭ್ರಚಮರವ ಡಾಳಿಸುತೆಳೆವೆಂಗಳೆಸೆದರರ್ತಿಯಲಿ (ಕಂನವಿ. ೮-೨೪). ೨. ಸುತ್ತಲೂ ಬೀರು ; ಹರಡು ; ವ್ಯಾಪಿಸು : ಗಾಳಿಯಲಿ ಬೆಳಕು ಬಣ್ಣಗಳಲೆಯನೊಡಿಸಿ ಕಣ್ಕಟ್ಟು ಮೋಹನವ ಡಾಳಿಸುವ ನಾಡು (ದ್ರಾಕ್ಷಿದಾ. ೫-೫). ೩. (ಪಗಡೆಯ ದಾಳವನ್ನು) ಬೀಸಿ ಹಾಕು; ಎಸೆ ; ಉರುಳಿಸು : ಕಾಲೋಚಿತ ಕಿತವರನನ್ಯತಾಲಯರಂ ಪೊರಗೆ ಕರೆದು ಪಣಬಂದವನೊಲ್ದಾಳೋಚಿಸಿ ಡಾಳಿಸಿದಂ ಸೋಲಕ್ಕಿರ್ದಕ್ಷಯುಗಳಮಂ ನಳಭೂಪಂ (ನಳಚಂ. ೫೦೫). **ಡಾಳಯಿಸು$_2$ :** ೧. ಇಕ್ಕೆಲದಾಲವಟ್ಟಂ ಚವರ ಕುಂಚಂ ಡಾ[ಪಾಠಾಂ. ಢಾ]ಳಯಿಸೆ ಗದ್ದುಗೆಯ ಮೇಲಿಹ ಬಿಜ್ಜಳನ ಕಂಡು (ಬಸವು. ೬೦-೫೦) : ಡಾಳಯಿಸುತಿಹ ಕನಕ ಚಾಮರದೋಳಿ (ಶಂಕದಾ. ೯-೨೨). **ಡಾಳ್ಯೈಸು$_2$ :** ೧. ಬಾಲೆಯರು ಬಣ್ಣಿಸಿ ಚಮರವ ಡಾಳ್ಯೈಸುತ ಬಂದರು (ಕ್ರೀಪಾಲ. ೦೩-೦೮೭). **ಢಾಳಯಿಸು :** ೧. ಚವರ ಕುಂಚಂ ಢಾ[ಪಾಠಾಂ. ಡಾ]ಳಯಿಸೆ (ಬಸವು. ೩೦-೫೦). **ಢಾಳಿಸು$_2$ :** ೧. ಢಾಳಿ

ಸುವ ಚವುರಿ ಸೀಗುರಿಗಳೊಗ್ಗಿನ ಕುಱುಹುವಿಡಿದು ನಡೆದು (ಚಿಜಕಾ. ೮-೭೦) ; ಲೋಚನಪುತ್ರಿಕೆಗಳು ಢಾಳಿಸುತಿರ್ಪ ಚಮರಗಳೆಂಬಂತೆ ಖೇಚರ ಭೂಚರಸತಿಯರ ಕಣ್ಣ ಮರೀಚಿಯೊಪ್ಪಿದುವೀಶ್ವರಗೆ (ಶ್ರೀಪಾಲ. ೧೪-೮೦) : ನಳಿನಮುಖಿಯರು ಚವರಗಳನೆಡಬಲದೊಳಗೆ ಢಾಳಿಸುತೆಯ್ತರಲು (ಕುಮಾಸಾಂ. ೧೦-೭೦) ; ಎತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾವರಂಗಳಿಂ (ಭರಚ. ೩-೮೦); ಚಂದ್ರಾದಿತ್ಯರುಭಯಚಾಮರಗಳಂ ಪಿಡಿದು ಢಾಳಿಸೆ (ಚಿಬಪು. ೨-೩೦). ೪. ಅಲುಗು ; ತೊಳೆ ; ಜಾಲಾಡಿ ಹೊಳೆಯುವಂತೆ ಮಾಡು : ಅಱಿಷೆಂಬ ಮೂಸೆಯೊಳಗಿಟ್ಟು ಪರಮ ಜ್ಞಾನದಿಂ ಕರಗಿಸಿ ಸುಮನವೆಂಬ ನಿರ್ಮಲೋದಕದಲ್ಲಿ ಢಾಳಿಸಿದ ಶುದ್ಧ ಸುವರ್ಣ (ಅದವ. ೦೩೮). [ ಡಾಳ್$_{2}$ + – ಇಸು$_{3}$ ]

**ಡಾಳು** 'ಡಾಲು$_{2}$' ನೋ.

**ಡಾಳೆ, ಢಾಳೆ** (ನಾ). ಮೋಸಗಾರ್ತಿ ; ವಂಚಕಿ ; ಥಳುಕುಗಾತಿ ; ಗಯ್ಯಾಳಿ : ಮೆಯ್ಯನೆ ಮಾಱುವಾಕೆ ಭವಮಂ ಪೇಟ್ ಮಾೞಳೇ ಸಂತೆಯೊಳ್ ಧನಕಾನಾೞನಿವಳ್ಗೆ ದೈವವೞಗಿನ್ನೀ ಸೂಳೆಯಂ ಡಾಳೆಯಂ (ಲೀಲಾವ. ೨-೦೦೩) ; ಚಂಡಪ್ರದ್ಯೋತನೆಂಬರಸಂ ಆಕೆಯನೆೞದುಕೊಳ್ವೆನೆಂದು . . . ತನ್ನ ಪೆರ್ಗಡೆಗಳಂ ಡಾ[ಪಾಠಾಂ. ತಾ] ಳೆಯರಪ್ಪ ಸಬ್ಬವದ ಪೆಂಡಿರುಮಂ ಪ್ರಭಾವತಿಯಲ್ಲಿಗಟ್ಟಿ (ಜೀವಸಂ. ೨೨೭-೩೫ ಪ) : ಆಟ ನೇಹವಂ ಮೆಱೆದು ಹೊಳ್ಳಿಸಿ ಬಿಟ್ಟಪೆನೆಂಬ ಡಾಳೆಯಂ ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಹಿಟ್ಟುಗುಟ್ಟಿ ಬೊಟ್ಟಿಡುವುದು (ಅನಂಪು. ೮-೫೬) ; ಕೂರಾನೆ . . . ದಾಂಟುವುದಿಡುಗುಡ್ಡೆಗಳ ಗಿರಿಗಳವಿಕ್ಕಿ ದಾಂಟುವ ಡಾಳೆಯಂದದೊಳು (ಭರಚ. ೩೬-೭೫). ಢಾಳೆ: ಇಳಿಕೆಯ್ದುದು ಹೊಳ್ಳಿಸಿ ತಿಂಬ ಢಾಳೆಯಂ (ಚಾಧಪು. ೧೫-೦೦೭) ; ಪುಸಿಯಳಿಪಂ ನಿಮಿರ್ಚಿ ತಮಗಿಲ್ಲದ ಬೇಂಟಮನುಂಟುಮಾಡಿ . . . ಮುಟ್ಟದ ಮುನ್ನಮೆನ್ನರಂ ದೆಸೆವಲಿಗೆಯ್ದರೇನೋ ಕಡು ಢಾಳೆಯರೊಂದಿರುಳಲ್ಲಿ ಸೂಳೆಯರ್ (ಧರ್ಮನಾ. ೨-೦೦೩) ; ಮುತ್ತಿನ ಹಾರವ ಕಳ್ದರೆಂದೆಮಗಾಪತ್ತನೆನೆಸಿದ ಢಾಳೆಯನು ಅತ್ತಿತ್ತ ಹೋಗದಂದದಿ ಕಾದುಕೊಂಡಿರಿ (ಪ್ರಭಂಜ. ೧-೦೭೯).

[ ಡಾಳ್$_{1}$ + – ಎ$_{2}$ ]

**ಡಾಳೆವೆಂಡತಿ** (ನಾ). ಧೂರ್ತಳಾದ ಹೆಣ್ಣು ; ಹಾದರಗಿತ್ತಿ : ತೊಡಿಗೆ ಸುಸರ ಹಾರದ ಮುತ್ತಿನಂತೆ ಸರದೊಳಳವಡುವ ಡಾಳೆವೆಂಡತಿಯಂತೆ ಕೈಸನ್ನೆಯಱಿವ ಜಾತಿ ಜಾಯಿಲಂಗಳಂ (ಅನಂಪು. ೨-೩೦ ಪ).

[ ಡಾಳೆ + ಪೆಂಡತಿ (<ಪೆಂಡಿತಿ) ]

**ಡಾಳೈಸು$_{1}$** 'ಡಾಳಯಿಸು$_{1}$' ನೋ.

**ಡಾಳೈಸು$_{2}$** 'ಡಾಳಿಸು$_{2}$' ನೋ.

**ಡಿಂಕಿಸು** (ಕ್ರಿ). (?) : ಉತ್ತರಗುಣಂಗಳವನಲ್ಪಮನಾಂ ಡಿಂಕಿಸದೆ ನೆನಪಱೆ ನನಾಚಾರಂಗಳಂ (ರತ್ನಕ. ೨-೧೫) . [ ? ]

**ಡಿಂಗರ** (ನಾ). ೧. ಸೇವಕ ; ಅಡಿಯಾಳು ; ಕಿಂಕರ ; ಭಕ್ತ : ಪಾರ್ವರೆಂದೊಡೆ ಪಾಪಂ ಬಿಡೆ ಪೋಪಂತದು ಪೇಟಾ ತುಡುಗುಣಿಯೋ ತಿರಿವ ಗೊರವನೋ ಡಿಂಗರನೋ [ಪಾಠಾಂ. ಪೇಟೆಯಿಂದಂ] (ಸಮುಪ. ೧೦-೮೮) ; ಹರಶರಣೆಂಬಂ ಭಕ್ತರ ಕರುಣವೆ ಶರಣೆಂಬ ಶಿವನ ಡಿಂಗರನೆಂಬಂ ಹಿರಿಯಣ್ಣ ಸಾವಿದೇವನ ಪರಮಾನುಜ್ಞೆಯನೆ ತಾಳ್ದಿದಂ ಮುದ್ದರಸಂ (ಸೌಇಇ. IX-1, ೨೯೭-೬೦ ; 1177) ; ಕುಲವುಳ್ಳ ನರಂ ಪೆಱರೆಂಜಲನುಂಡುಂದೆಲ್ಲಮವನ ಡಿಂಗರನೆಂಬರು ಸಲೆಯಡಗುಂ ನಾಯೆಂಜಲ ನಲಿದಲಸದೆ ತಿಂದಂದು ನಾಯ ಡಿಂಗರನಲ್ತೆ (ಪಸಾರ. ೫೯೮-೧೪). ೨. ವಂಚಕ ; ಮೋಸಗಾರ; ಠಕ್ಕ. ೩. ನೀಚ ; ಅಲ್ಪಮನುಷ್ಯ ; ಕ್ಷುದ್ರ. ೪. ಬೊಜ್ಜು ದೇಹವುಳ್ಳವನು ; ದಪ್ಪವಾದ ಶರೀರವುಳ್ಳವನು ; ಸ್ಥೂಲಕಾಯ ; ಠೊಣಪ. [ ಸಂ. ]

**ಡಿಂಗರಿಗ** (ನಾ). = ಡಿಂಗರ ೧ : ನಿಮ್ಮ ನಂಬಿದ ಶರಣರ ಡಿಂಗರಿಗ ನಾನಯ್ಯ (ಬಸವ. ೪೭೪) : ಶಿವನ ಡಿಂಗರಿಗನಡಗಿರ್ದ ಗುಹೆಯದು ನೋಡ (ಜಡರ. ೦೩೩-೨೨) ; ಸಕಲಕ್ಕೆ ರಾಜಾಧಿರಾಜನಾ ತ್ರ್ಯಂಬಕಂ ತ್ರಿಪುರಾರಿಯಾತಂಗೆ ಡಿಂಗರಿಗರಂಬುಜಭವಾಚ್ಯುತ-ದ್ಯುಖಿಲರು (ಪದ್ಮರಾ. ೦೦-೪೦) ; ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ ಅಳುಕ ಕೂದಲು ಹೞದುದಾದರೆ ಬಳಿಕ ನಾ ಡಿಂಗರಿಗನಲ್ಲ (ಕುವ್ಯಾಭೀ. ೬-೪೫) ; ಡಂಗುರವ ಸಾಱ ಹರಿಯ ಡಿಂಗರಿಗರೆಲ್ಲರು ಭೂಮಂಡಲಕೆ ಪಾಂಡುರಂಗವಿಟ್ಠಲ ಪರದೈವವೆಂದು (ಪುರಂದ. ೦-೫೩-೦) ; ಸಂಗೀತಲೋಲ ಶಿರಿ ವಿಜಯವಿಠಲರೇಯನ ಡಿಂಗರಿಗನಾಗದೆ ಸಕಲ ಸೌಖ್ಯ ಬಾರದು (ವಿಹಾಸು. ೮೭-೦); ಇಲ್ಲದ್ದರಲ್ಲಿ ಬಾಯಿಹಾಕುವ ಊರ ಡಿಂಗರಿಗ ಅವ (ಸಂಕಂಸ. ೪೩); 'ಶನಿಯ' ಎಂಬ ಅರ್ಧಮಾನುಷ ಕಿಂಕರನೂ ಕಿನ್ನರವರ್ಗಕ್ಕೆ ಸೇರಿದ ಒಬ್ಬ ಅತಿಮಾನುಷ ಡಿಂಗರಿಗನೂ ಇದ್ದರು (ಬಿಗಾಳಿ. ೭).

[ ಡಿಂಗರ + – ಇಗ ]

**ಡಿಂಗಿ** (ನಾ). ದೋಣಿ ನಡೆಯಲು ಹಾಯಿಬಟ್ಟೆಯನ್ನು ಹಗ್ಗಗಳಿಂದ ಬಿಗಿಯಲು ಉಪಯೋಗಿಸುವ ಕೂವೆಮರ ; ಕೂಪಕ. 'ಡಿಂಗಿ ದೋಣಿ' ಪರಾ. [ ←ಪಾಠ. ಡಿಂಗೀ ]

**ಡಿಂಗಿದೋಣಿ** (ನಾ). ಹಾಯಿ ಕಟ್ಟಿದ ದೋಣಿ; ಕೂವೆಮರವುಳ್ಳ ದೋಣಿ : ನದಿಯ ಮಧ್ಯ ಸರಿಯಾಗಿ ಒಂದು ಡಿಂಗಿದೋಣಿ ವೇಗ ಪ್ರವಾಹದಲ್ಲಿ ಓಡುತ್ತಿದೆ (ನಿಬಂಧ. II, ೨೦೭). [ ಡಿಂಗಿ + ದೋಣಿ$_{3}$ ]

**ಡಿಂಗು$_{1}$** (ನಾ). ಒಂದು ಕ್ಷುದ್ರ ದೇವತೆ: ಗಾಡಿಗ ಡಿಂಗು [ಪಾಠಾಂ. ಬು] ಗಂಗೆ ಚಿಕ್ಕ ಮುಟ್ಟಗೆ ಹಸುರಂಬಲಿ ಮುಟ್ಟಗೆ ಹುರಿಬುತ್ತಿಯ ಬೇಡಿ ಮನುಷ್ಯರ ಹಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದೆ ಈಡಾಡಿದ ಕೊಳಂಬಲಿಯನಾಯ್ದು ಕುಱುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥಕ ಕೆಡದೇಡ (ಬಸವ. ೫೫೭). [ ? ]

**ಡಿಂಗು$_{2}$** 'ಧಿಂಗು' ನೋ.

**ಡಿಂಡ** 'ದಿಂಡ$_{4}$' ನೋ.

**ಡಿಂಡಲ** 'ದಿಂಡ$_{1}$' ನೋ.

**ಡಿಂಡಿಗ** 'ದಿಂಡ$_{1}$' ನೋ.

**ಡಿಂಡಿಮ** (ನಾ). ೧. (ಡಿಮ್, ಡಿಮ್ ಎಂಬ ಶಬ್ದಮಾಡುವ) ಒಂದು ಬಗೆಯ ಚರ್ಮವಾದ್ಯ ; ಡವುಡೆ : "ಡಿಂಡಿಮವೆನಲು ಮೊರೆವ ಡೌಡೆಯೆನಿಕ್ಕು" (ಮಂಗರಾ. ೨೪-೭); ಡಿಂಡಿಮರವದೊಳ್ ವನವೇತಂಡಮನೆಚ್ಚರಿಸುತಿರ್ಪವೊಲ್ (ಕಾದಂಪೂ. ೦೪೭); ಎಱಗನ ಗಂಡ ಡಿಂಡಿಮದ ಡಂಬರವೊಪ್ಪುವುದೀ ಧರಿತ್ರಿಯೊಳ್ (ಎಕ. V, ಅರಸೀ. ೦೩೮-೩೦; 1176); ಕೋಟಿ ಡಿಂಡಿಮಗಳನು ಬಾರಿಸೆ ಗೋಟು ತುಂಬಿತು ಜಗದ ಕಿವಿಗಳ ಪಾಟಿ ಹೊಟ್ಟಿತು (ಕೌಶಿರಾ. ೨೪-೪). ೨. [ಛಂದ] ಒಂದು ವೃತ್ತದ ಹೆಸರು : (?). [ ಸಂ. ]

**ಡಿಂಡೀರ** (ನಾ). ಕಡಲನಾಲಗೆ ; ನೊರೆ ; ಫೇನ ; ಬುರುಗು: "ಘನತರ ಫೇನಂ ಡಿಂಡೀರ ನಾಮಂ" (ವಸ್ತುಕೋ. ೨೨-೪). "ಡಿಂಡೀರಮೆನೆ ಫೇನಮೆನೆ ನೊರೆಯಕ್ಕು" (ಮಂಗರಾ. ೦೨೩-೦೨); "ಡಿಂಡೀರಃ, ಅಬ್ಧಿಕಫಃ, ಫೇನಃ – ಸಮುದ್ರದ ನೊರೆ" (ಸಿದ್ಧಾಂತಿ. ೩೬೨) ; ಡಿಂಡೀರಾವಳಿ ಶಂಖವಲ್ಲರಿಯಿಂ . . . ವಿದ್ರುಮಂ ಚಂಡೌರ್ವಾನಲದೀಪ್ತಿಯಿಂ ದ್ವಿಗುಣಿಸುತ್ತಿರ್ಪ ಮಹಾಂಭೋಧಿಯಂ ಕಂಡು (ಜಗವಿ. ೭-೦೬) ; ಸಚರಾಚರವ್ರಾತ ತೋಱ ತೋಱಿಯಡಂಗುವುವು ಡಿಂಡೀರನಿಕರದವೋಲು (ನಿಘಾಗ. ೦೦-೦೪-೨೫); ಡಿಂಡೀರ ಪಿಂಡೌಘ ಮಂಜುಳೆಯಂ ಪೆಂಪಿನ ಲಂಪನಾಳ್ವ ಪೊಳೆಯಂ ಪೇಳ್ವಣ್ಣಸಲ್ಬರ್ಕರ್ಪಮೋ (ರಾಜಶೇ. ೨-೯).

[ ಸಂ. ]

**ಡಿಂಡೀರಪಾಂಡುರ** (ಗು). ನೊರೆಯಂತೆ ಬೆಳ್ಳಗಿರುವ,–ಬಿಳುಪಾದ : ನಿರವದ್ಯಾನ್ವಯನುದ್ಧ್ಯಮುದ್ಧತ ಮಹಾಕ್ಷೀರಾಬ್ಧಿ ಡಿಂಡೀರಪಾಂಡುರಂ . . . ನೆಲೆಗೊಳ್ಗಾ ಚಂದ್ರತಾರಂಬರಂ (ಕವಿರಾ. ೩-೨೩೬).
[ ಡಿಂಡೀರ + ಪಾಂಡುರ ]

**ಡಿಂಡೀರಪಿಂಡ** (ನಾ). ನೊರೆಯ ಮುದ್ದೆ,–ಉಂಡೆ ; ಫೇನರಾಶಿ : ಏಕಾವಳೀವಿಳಾಸಾವಹಸಿತಾಮೃತ ಡಿಂಡೀರಪಿಂಡಪಾಂಡುರಂ (ಶಾಂತಿಪು. ೭-೧೩ ವ): ಕಂಡರಿಸಿ ಪಳುಕಿನಿಂದಮಖಂಡಿತಶೌಚಗುಣ ಸುರನದೀಸಮುಪ ಚಿತಂ ಡಿಂಡೀರಪಿಂಡಮೆನಿಸಿ ಕಮಂಡಲು ಸೊಗಯಿಪುದು ಬಾಳಚಂದ್ರ ವ್ರತಿಯಾ (ಮಲ್ಲಿಪು. ೧೦-೧೩೬). [ ಡಿಂಡೀರ + ಪಿಂಡ ]

**ಡಿಂಬ** (ಗು). ೧. ಅಲ್ಪವಾದ ; ಸಣ್ಣದಾದ. 'ಡಿಂಬಾಹವ' ಪರಾ. (ನಾ). ೨. ಮೈ ; ದೇಹ ; ಶರೀರ: ಸಂಸಾರ ಮಾಯಾಪಾಶವ ಬಿಡಲೊಲ್ಲದೆ ಡಿಂಬವ ನೆಚ್ಚಿ ಕೆಟ್ಟೆಯಲ್ಲಾ ಹಂಸಾ (ಬಸಹ. ೧೦-೨೫) ; ಕುಂತೀ ಮಕ್ಕಳಿಂದೊಡೆ ಹರಹಿಕೊಂಬರಿ ಡಿಂಬವೆಮ್ಮಲಿ ಜೀವವವದಿರಲಿ (ಕುವ್ಯಾ.ಉ. ೫-೧೮) ; ಎವೆ ಮಿಡುಕದವನಿವರು ಪೀಠಾವಳಿಯೊಳಿರ್ದರು ಬಱಿಯ ಡಿಂಬದೊಳು (ಜೀವಂಜ. ೮-೭೦) ; ಕಂಬ ಮುಱಿದು ಡಿಂಬ ಬಿದ್ದು ಅಂಬರಕೆ ಹಾಱಿಹೋಯಿತು (ಪುರಂದ. ೧-೧೧೨-೬) ; ಈಸು ಪೊತ್ತೀಕೆ ಪವಡಿಸಿದನೆಂದೆಬ್ಬಿಸಲ್ ಶ್ವಾಸವಿಲ್ಲದ ಡಿಂಬವಿಶೆ--ಕಂಡು (ಹಬಪು. ೬-೨೩) ; ವಿಷಯಂಗಳಿಗೆ ಕಿವಿ ಜೋತುಬಿದ್ದು ಈ ಡಿಂಬವನ್ನು ಮೋಹಿಸದಿರಲೆಪೂ ಪ್ರಾಣಿ (ವಿದಾಶ. ೪೮-೭). ೩. ಎಳೆವಯಸ್ಸಿನ ಮಗು ಅಥವಾ ಪ್ರಾಣಿ ; ಶಿಶು. ೪. ವಿಪ್ಲವ ; ದಂಗೆ ; ಲೂಟಿ. 'ಡಿಂಬ ಯುದ್ಧ' ಪರಾ. ೫. ಅತಿವೃಷ್ಟಿ, ಅನಾವೃಷ್ಟಿ, ಇಲಿಹೆಗ್ಗಣಗಳ ಕಾಟ, ಮಿಡಿತೆ, ಹಕ್ಕಿ ಮೊದಲಾದುವುಗಳ ಹಾವಳಿ ಮತ್ತು ಪರ ರಾಜರ ಮುತ್ತಿಗೆಗಳಿಂದಾಗುವ ತೊಂದರೆ ; ಈತಿಬಾಧೆ ; ಡಾಮರ: (ಶ). ೬. ಗೋಲಾಕಾರದ ವಸ್ತು ; ಉರುಳಿ; ಚೆಂಡು. ೭. ಮೊಟ್ಟೆ; ತತ್ತಿ. ೮. ದಿಬ್ಬ ; ತಿಟ್ಟು (?): ತಲೆ ಕಾಮನಗುಡ್ಡದ ಬೊಂಬೆಗಲ್ಲ ಮೆಂತ್ಯ ಡಿಂಬದ ಮೇಲೆ ಬಗುತನ ಕಟ್ಟಿಗೆ ಬ (ಎಕ. III, ತಿರುಮ. ೭೩-೪೫೯; 1748).
[ ಸಂ. ]

**ಡಿಂಬಯುದ್ಧ** (ನಾ). ೧. ಸಣ್ಣ ಕದನ ; ಕ್ಷುಲ್ಲಕ ಕಲಹ : "ಸಣ್ಣ ಸಣ್ಣ ಅಥವಾ ಹೊರವಲಯದಲ್ಲಿರುವ ಸೈನಿಕ ಪಂಗಡಗಳಿಗೆ ಅನಿಯತವಾಗಿ, ಮುನ್ನಿರೀಕ್ಷೆಯಿಲ್ಲದೆ, ನಡೆಯುವ ಹೋರಾಟ; ಡಿಂಬಯುದ್ಧ; ಸಣ್ಣಕಾದಾಟ, ಅಲ್ಪ ಕದನ, ಹೊಡೆದಾಟ; (ಬುದ್ಧಿವಂತಿಕೆ, ತರ್ಕ, ಮೊ. ಗಳ) ವಾಗ್ಯುದ್ಧ" (Skirmish. ಇಂಕನಿ.). ೨. ದಂಗೆ ; ಲೂಟಿ ; ಕೊಳ್ಳೆ. 'ಡಿಂಬಾಹವ' ಪರಾ. [ ಡಿಂಬ + ಯುದ್ಧ ]

**ಡಿಂಬಾಹವ** (ನಾ). = ಡಿಂಬಯುದ್ಧ ೨ : (ಶಬ್). [ ಡಿಂಬ + ಆಹವ ]

**ಡಿಂಬು** (ನಾ). ೧. ಮೈ ; ದೇಹ ; ಶರೀರ : ಕುಂಭಿನಿಪತಿ ನಮ್ಮ ವಿಜಯವಿಠಲರೇಯ ಡಿಂಬಿನೊಳಗೆ ನಿಂದು ಪಾಲಿಸುವನು ನಿತ್ಯ (ವಿಸಾಸು. ೩೦-೪). ೨. ಸ್ವಲ್ಪ ಎತ್ತರವಾದ ಸ್ಥಳ ; ದಿಬ್ಬ ; ತಿಟ್ಟು : ಆ ಮಹಾ ರಭಸಕ್ಕೆ . . . ಪರ್ವತದಾ ಮಹಾಡಿಂಬಿನಲ್ಲಿ ಪಾಂಡುವಿನರಸಿ ನಡುಗಿದಳು (ಸಂಭಪ. ೧೫-೭೩). ೩. ದೀಪದ ಆಧಾರ ; ದೀಪವನ್ನಿಡುವ ಸಣ್ಣ ಪೀಠ : (ಶ). [ <ಸಂ. ಡಿಂಬ ]

**ಡಿಂಬೆ** (ನಾ). ಮೂಗಿನ ಹೊರಳೆಗಳ ನಡುವಿನ ಸಿಂಬೆ (?) : ತುಂಬಿದ ತಾನಗಳಿರ ಬನ್ನಿ ರಾಯನ ತುಂಬಿದ ಬವರಿಗಳಂತೆ ಕೆಂಬಲ್ಲ ಥಾಳದಂತರಸನ ಮೂಗಿನ ಡಿಂಬೆಯಂತೆಂದು ಪಾಡಿದಳು (ಭರಚ. ೧೧-೬೦). [ ? ]

**ಡಿಂಭ** (ನಾ). ೧. ಆಗ ತಾನೆ ಹುಟ್ಟಿದ ಕೂಸು ಅಥವಾ ಪ್ರಾಣಿಗಳ ಮರಿ: ಒಗರು ಚಿಗುರುಗಳುಂಡ ಪಿಕ ಡಿಂಭಗಳು ಚದುರುತ ನುಡಿವವೋಲ್ (ಅನಂರಾ. ೨-೧-೩೮). ೨. ಮೈ ; ದೇಹ ; ಶರೀರ : ಅಕ್ಕ ಮರುಳೌ ಚಿತ್ತವವಳಲಿ ಸಿಕ್ಕಿ ಬೇರ್ವರಿಯಿತ್ತು ಬರಿದೇ ವಿಕ್ಕ ಡಿಂಭ[ಪಾಠಾಂ. ಬ]ಕೆ ಮದುವೆಯಂಟೇ ಮನವ ಬೇಱಿರಿಸಿ (ಕುವ್ಯಾ.ವಿ. ೨-೪೬) : ಡಿಂಭದೊಳು ಶಬ್ದವಾಗಾದಿ ಶ್ರೋತ್ರಗಳಲ್ಲಿ ಇಂಬಾಗಿ ತತ್ವೇಶರೆಲ್ಲ ತುಂಬಿಹರೊ (ಪುರಂದ. ೧-೨೧೫-೪) : ಡಿಂಭದೊಳು ಕಾಂಬುದೆಂದಸಮಗ್ರವಲ್ಲವಿದು ಕುಂಭದೊಳ ಗಡಗಿದ್ದರೂ ಅಲ್ಪವಲ್ಲ (ಮಲದೇ. ೩೭-೭೦). ೩. ತಿಳಿಗೇಡಿ ; ದಡ್ಡ ; ಮೂರ್ಖ. ೪. ಗರ್ಭಾಶಯ ; ಗರ್ಭಕೋಶ : ಡಿಂಭಗಳನೊಡೆದು ಬನ್ನಿ ಕಂಭಗಳನೊಡೆದುಬನ್ನಿ (ಗರಂ. ೫೩-೧೧). [ ಸಂ. ]

**ಡಿಂಭಕ** (ನಾ). = ಡಿಂಭ. [ ಸಂ. ]

**ಡಿಂಭೆ** (ನಾ). ಮಗು ; ಶಿಶು. [ ಸಂ. ಡಿಂಭಾ ]

**ಡಿಕಮಲಿ, ಡಿಕ್ಕಿಮಾಲೆ, ದಿಕಾಮಲಿ, ದಿಕ್ಕಾಮಲ್ಲಿ** (ನಾ). ಒಂದು ಬಗೆಯ ಮರ ಮತ್ತು ಆ ಮರದಿಂದ ತೆಗೆದ ಒಂದು ಗಂದಿಗದ್ರವ್ಯ: ಸೊರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸಗಳು ೧ ಅಕ್ಕಲಖಾರ . . . ಡಿಕಮಲಿ (ಕಾರಿಂಗ) (ಮುಂಬವ್ಯಾ. ೮೨೫). **ಡಿಕ್ಕಿಮಾಲೆ:** ಕಡಲೆಕಾಳಿನಷ್ಟು ಡಿಕ್ಕಿಮಾಲೆಯನ್ನು ಹಾಲಲ್ಲಿ ತೇದು ಕುಡಿಸು ವುದು (ಕುನಮು. ೮). **ದಿಕಾಮಲಿ :** ಬಿಕ್ಕಿಗಿಡ, ದಿಕಾಮಲಿ, ಕಂಬಿಮೇಣ (ವ್ಯಾಶಿಗಿ. ೩೮-೭೬೦). **ದಿಕ್ಕಾಮಲ್ಲಿ :** (ಶ).
[ ←ಹಿಂ. ಡಿಕಾಮಾಲೀ; ಮರಾ.ಡಿಕಾಮಾಲೀ, ಡಿಕೇಮಾಲೀ, ಡಿಂಕೇಮಾಲೀ ]

**ಡಿಕರಿ** 'ಡಿಕ್ರಿ' ನೋ.

**ಡಿಕಾವು** 'ದಿಖಾವು' ನೋ.

**ಡಿಕ್ಕಿ, ಢಿಕ್ಕಿ** (ನಾ). ೧. ತಲೆಯಿಂದ ತಲೆಯನ್ನು ತಾಟಿಸುವಿಕೆ. 'ಡಿಕ್ಕಿ ಹೊಡೆ' ಪರಾ. ೨. ಒಂದು ವಸ್ತುವು ಇನ್ನೊಂದು ವಸ್ತುವನ್ನು ಜೋರಾಗಿ ತಾಗುವುದು, – ಅಪ್ಪಳಿಸುವುದು, – ಘಟ್ಟಿಸುವುದು : ಮುಂಬಯಿಯಲ್ಲಿ ಇಂತಹ " ಡಿಕ್ಕಿ "ಗಳು ದಿನಾಲೂ ನೂರಾರು ಆಗುತ್ತವೆ (ಎಡಹ. ೧). ೩. (ಅಲಂ) ಮಾತಿನಲ್ಲಿ ಹೊಂದಾಣಿಕೆಯಿಲ್ಲದಿರುವುದು; ವಿರೋಧದ ಮಾತು : ಬೆಳಗಿನ ಹೇಳಿಕೆಯು ಸಂಜೆಯ ಹೇಳಿಕೆಗೆ ಡಿಕ್ಕಿಯಾಗಲೇಬೇಕು (ಹನ್ನೊಂದ. ೭೭). **ಢಿಕ್ಕಿ :** 'ಢಿಕ್ಕಿಹೊಡೆ' ಪರಾ.
[ < ದೇ ]

**ಡಿಕ್ಕಿಕೊಡು** (ಕ್ರಿ). ೧. ಜೋರಾಗಿ ತಲೆಯಿಂದ (ಇನ್ನೊಬ್ಬನ) ತಲೆ ಯನ್ನು ಹಾಯು,–ತಾಗು,–ತಾಟಿಸು: ಅವನು ಓಡಿಬಂದು ನನ್ನ ತಲೆಗೆ ಡಿಕ್ಕಿಕೊಟ್ಟನು (ರೂಢಿ). ೨. ಇನ್ನೊಂದು ವಸ್ತುವನ್ನು ಜೋರಾಗಿ ತಾಗು,–ಅಪ್ಪಳಿಸು,–ಘಟ್ಟಿಸು : ನೋಡ ನೋಡುತ್ತಿದ್ದಂತೆ ವಾಹನ ಗಳೆರಡು ಡಿಕ್ಕಿಕೊಟ್ಟು ಕೆಳಕ್ಕೆ ಉರುಳಿದವು (ರೂಢಿ).
ಡಿಕ್ಕಾಡಿಕ್ಕಿಕೊಡು (ದ್ವಿರುಕ್ತಿ) : (ಶ). [ ಡಿಕ್ಕಿ + ಕೊಡು$_1$ ]

**ಡಿಕ್ಕಿಮಾಲೆ** 'ಡಿಕಮಲಿ' ನೋ.

**ಡಿಕ್ಕಿಹೊಡಿಸು** (ಕ್ರಿ). ತಲೆಯನ್ನು ಜೋರಾಗಿ ತಾಗುವಂತೆ ಮಾಡು ; ಘಟ್ಟಿಸುವಂತೆ ಮಾಡು: ಅವರು ಸಂತೋಷದಿಂದ ಆಡುತ್ತಿದ್ದಾಗ . . . ಜುಟ್ಟುಹಿಡಿದು ತಂದು ತಲೆತಲೆಗೆ ಡಿಕ್ಕಿಹೊಡಿಸುವನು (ವಹಥಾ. ೧೬).
[ ಡಿಕ್ಕಿ + ಹೊಡಿಸು (<ಪೊಡೆಯಿಸು) ]

**ಡಿಕ್ಕಿಹೊಡೆ, ಢಿಕ್ಕಿಹೊಡೆ** (ಕ್ರಿ). ೧. = ಡಿಕ್ಕಿಕೊಡು ೧. 'ಡಿಕ್ಕಿಹೊಡಿಸು' ಪರಾ. ೨. = ಡಿಕ್ಕಿಕೊಡು ೨: ಒಂದು ದಿನ ಓದುತ್ತ ಹೋಗುತ್ತಿರುವಾಗ ದಾರಿಯಲ್ಲಿನ ಲೈಟು ಕಂಬಕ್ಕೆ ಡಿಕ್ಕಿ ಹೊಡೆದು ಹಣೆಯಲ್ಲಿ ಬೋರೆ ಬರಿಸಿಕೊಂಡ (ಶಾಲಿಮ. ೨೧೮) ; ನನ್ನ ಮುಖ ನೋಡಿದ್ರಾ ಬಂದರೆ ಯಾರಿ ಗಾದರೂ ಡಿಕ್ಕಿಹೊಡೆಯುತ್ತೀರ (ದೂಬಿಟ್ಟ. ೪೯). **ಢಿಕ್ಕಿಹೊಡೆ :** ೧. ಢಿಕ್ಕಿಹೊಡೆದೆನು ಪಂಜರದ ಕಂಭ ಮಾಡಕ್ಕೆ (ನವ್ಯಧ. ೮೫). ೨. ಮೇಲ್ವಾ ಯ್ವುದಟ್ಲಾಂಟಿಕಾಂಭೋಧಿ ಪೆಸಿಫಿಕಂಬುಧಿಯೊಡನೆ ಢಿಕ್ಕಿಹೊಡೆದುಕ್ಕಿ (ಶ್ರೀರಾಮಾ. ೧೬೫-೩೩೭). [ ಡಿಕ್ಕಿ + ಹೊಡೆ$_1$ (<ಪೊಡೆ$_1$) ]

**ಡಿಕ್ರಿ, ಡಿಕರಿ** (ನಾ). (ನ್ಯಾಯಾಲಯದ) ತೀರ್ಪು,– ತೀರ್ಮಾನ : ಆದರೆ ಡಿಕ್ರಿಯು ಬೆಂಚಿನ ೩ ಜನ ಮೆಂಬರ ಹೆಸರಿನಲ್ಲಿಯೂ ಕೊಡಲ್ಪಡ ತಕ್ಕದ್ದು (ಗ್ರಾಮಾಕ. ೧೮); ಅಂತೂ ಕೋರ್ಟಿನಲ್ಲಿ ನಾಡಿದ್ದು ಅದು ಡಿಕ್ರೀ ಆಗಿಬಿಟ್ಟರೆ, ನನ್ನ ಹಣ ಪುನಃ ಸೆಟ್ಟಿ ಪೆಟ್ಟಿಗೇಲಿ ಸುರಕ್ಷಿತವಾಗಿರುತ್ತೆ (ಮಾಂಗಲ್ಯ. ೪೪); ಕೋರ್ಟಿನಲ್ಲಿ ವ್ಯಾಜ್ಯಮಾಡಿ ಡಿಕ್ರಿಮಾಡಿ ಸಾಲಿಗನ ಸರ್ವಸ್ವವನ್ನು ಸುಲಿದುಬಿಡುತ್ತಾರೆ (ಕುರುಕಾ. ೩೪); ಕೋರ್ಟಿನಲ್ಲಿ ವಿವಾಹವಿಚ್ಛೇದನವಾಗುವಂತೆ ಅರ್ಜಿದಾರರ ಪರ ಡಿಕ್ರಿ ಬಗ್ಗೆ ಪ್ರಾರ್ಥನೆ–ಅಂತ ಅರ್ಜಿಯಲ್ಲಿದೆ. (ಏಕಾಂಗಿ. ೨೦೪). **ಡಿಕರಿ :** ಮೋಸದಿಂದ ತನಗೆ ಬರಬೇಕಾಗಿಲ್ಲದ ಹಣಕ್ಕೆ ಡಿಕರಿ ಆಗುವಂತೆ ಮಾಡಿದರೂ (ಗ್ರಾಮಾಕ. ೬೪).
[ ←ಇಂ. Decree ]

**ಡಿಕ್ರಿದಾರ** (ನಾ). (ನ್ಯಾಯಾಸ್ಥಾನದಲ್ಲಿ) ತನ್ನ ಕಡೆಗೆ ತೀರ್ಪನ್ನು ಪಡೆದಿರುವ ವ್ಯಕ್ತಿ : ಸದರೀ ಸ್ವತ್ತನ್ನು ಹಿಡಿದು ಡಿಕ್ರೀದಾರನಿಗೆ ಒಪ್ಪಿಸುವುದರ ಮೂಲಕ ಡಿಕ್ರಿಯನ್ನು ಜಾರಿಮಾಡಬಹುದು (ಗ್ರಾಮಾಕ. ೩೩).
[ ಡಿಕ್ರಿ + – ದಾರ$_4$ ]

**ಡಿಗರು** 'ದಿಗರು' ನೋ.

**ಡಿಗುರು** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (ಸ).
[ <ಡೊಗರು ]

**ಡಿಗ್ರಿ** (ನಾ). ೧. (ಉಷ್ಣಮಾಪಕಯಂತ್ರದಲ್ಲಿ ಅಳೆಯುವ) ಉಷ್ಣದ ಅಳತೆ,–ಮಾನ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮಧ್ಯಮ. ೧೬೩); ಜ್ವರ ಅಪರೂಪವಾಗಿ ೧೦೩ ಡಿಗ್ರಿಗಳಿಗಿಂತ ಹೆಚ್ಚಾಗಿ ಹೋಗುತ್ತದೆ (ಕಲರೋ. ೪೨). ೨. [ಗಣಿತ] ಕೋನಮಾನ ; ಅಳತೆ ; ವೃತ್ತಪರಿಧಿಯ $\frac{೧}{೩೬೦}$ ನೆಯ ಭಾಗ : ಅವುಗಳ ಮೇಲೆ ಅಕ್ಷಾಂಶಗಳಂತೆ ಗುರುತು ಮಾಡಿರುವ ರೇಖೆಗಳು ಆಯಾ ಭಾವಗಳ 'ಡಿಗ್ರಿ'ಯನ್ನು ಸೂಚಿಸುತ್ತವೆ (ಸಾಂದಸ. ೦೯). ೩. ವಿಶ್ವವಿದ್ಯಾನಿಲಯಂಗಳು ಕೊಡುವ ಪಾಂಡಿತ್ಯಪದವಿ; ವಿದ್ಯಾಪ್ರಶಸ್ತಿ: ನಮ್ಮ ಹುಡುಗ ಕಾಲೇಜಿನಲ್ಲಿ ಓದಿ ಡಿಗ್ರಿ ಪಡೆದಿದ್ದಾನೆ (ರೂಢಿ). [ ←ಇಂ. Degree ]

**ಡಿಟ್ಟಂ ಜಮಾಬಂದಿ, ದಿಟ್ಟಂಜಮಾಬಂದಿ** (ನಾ). "ಹುಜೂರು ಜಮಾಬಂದಿಗೆ ಮುನ್ನ ತಾಲ್ಲೋಕು ಅಮಲ್ದಾರರು (ತಹಸೀಲ್ದಾರರು) ಪೂರ್ವಭಾವಿಯಾದ ಲೆಕ್ಕಗಳ ತನಿಖೆಮಾಡಿ ಹುಜೂರು ಜಮಾಬಂದಿ ಲೆಕ್ಕಗಳನ್ನು ತಯಾರಿಸುವುದು" (ನನ್ನೂರು. ಕೋಶ) : ಡಿಟ್ಟಂ ಜಮಾಬಂದಿಯಲ್ಲಿ ಮತ್ತು ಹುಜೂರು ಜಮಾಬಂದಿಯಲ್ಲಿ ಎಲ್ಲಾ ಶಾನುಭೋಗರ ಲೆಕ್ಕ ಚೆಕ್ಕಾದರೂ ನನ್ನೂರಿನ ಲೆಕ್ಕ ಇನ್ನೂ ಬಾಕಿ (ನನ್ನೂರು. ೧೩೨). **ದಿಟ್ಟಂಜಮಾಬಂದಿ:** ಚುಂಚನಕಟ್ಟೆ ಜಾತ್ರೆ, ಸ್ಪಾರ್ಕ್ಸ್ ಸಾಹೇಬರ ಆಗಮನ, ಕಸಬ ಹೋಬಳಿ ದಿಟ್ಟಂಜಮಾಬಂದಿ, ಇವುಗಳೆಲ್ಲಾ ಮುಗಿದ ಮೇಲೆ ನಾನು ಸಾಲಿಗ್ರಾಮಕ್ಕೆ ಹೋದೆ (ಕಲನ. ೦೫೧)
[ ಡಿಟ್ಟಂ$_0$ + ಜಮಾಬಂದಿ ]

**ಡಿತ್ಥ** (ನಾ). ೧. ಮರದಿಂದ ಮಾಡಿದ ಆನೆ ; ಮರದಾನೆ. ೨. ಒಂದು ಸಂಜ್ಞಾಶಬ್ದ; ಒಬ್ಬ ವ್ಯಕ್ತಿಯನ್ನು ಕುರಿತು ಹೇಳುವ, ಅವ್ಯುತ್ಪನ್ನವಾದ ಸಂಕೇತ ಶಬ್ದ : ಇವನು ಹೋಗುವವನು ಇವನು ಡಿತ್ಥನು ಎಂಬ ಅನುಭವಗಳಿಗೆ ಅನುಸಾರವಾಗಿ ಕ್ರಮವಾಗಿ ಜಾತಿವಿಕಲ್ಪ, ದ್ರವ್ಯವಿಕಲ್ಪ, ಗುಣವಿಕಲ್ಪ, ಕ್ರಿಯಾವಿಕಲ್ಪ ಮತ್ತು ನಾಮವಿಕಲ್ಪ ಎಂದು ಐದು ವಿಧ (ಭಾತತ್ತ್ವ. ೩೮೬). [ ಸಂ. ]

**ಡಿಪೊ** (ನಾ). (ಮಾರಲಿರುವ) ವಸ್ತುಗಳನ್ನು ಸಂಗ್ರಹಿಸಿರುವ ಮಳಿಗೆ,– ಉಗ್ರಾಣ : ರೇಷನ್ ಡಿಪೋಗಳಲ್ಲಿನ ಜನಸಂದಣಿಯಂತೆ ಜನಗಳ ನೂಕುನುಗ್ಗಲು ನೋಡಿದರೆ ನಮ್ಮ ಎದೆ ಒಡೆದು ಚೂರುಚೂರಾಗುತ್ತದೆ (ನಾಡಿಗೇ. ೩೦). [ ←ಇಂ. Depot ]

**ಡಿಪ್ತೀರಿಯ** (ನಾ). (ಸಾಮಾನ್ಯವಾಗಿ ಮಕ್ಕಳಿಗೆ ಬರುವ) ಒಂದು ಬಗೆಯ ರೋಗ; ಗಳಚರ್ಮರೋಗ; ಲೋಳೆ ಸಂಕೋಲೆ. ಗಂಟಲಿನಲ್ಲಿಯ ಶ್ಲೇಷ್ಮ ಚರ್ಮವು ಉದ್ದೀಪನಗೊಂಡು ಅದರಿಂದ ಹೊರಟ ಸ್ರಾವವು ಕೃತಕ ಚರ್ಮದಂತೆ ಪರಿವರ್ತನೆ ಹೊಂದುವ ಒಂದು ಭಯಂಕರ ವ್ಯಾಧಿ : ಡಿಪ್ತೀರಿಯದಿಂದ ನರಳುವ ಮಕ್ಕಳಿಗೆ ಧ್ವನಿ ಬದಲಾಯಿಸಿ, ಅವು ಏನೋ ವಿಚಿತ್ರವಾಗಿ ಅಳುತ್ತವೆ (ಗೃಹವಿ. ೦೪೩) : ಡಿಪ್ತೀರಿಯ ಮತ್ತು ಟೈಫಾಯ್ಡ್‌ಗಳಂತಹ ರೋಗಗಳು ಮೊಟ್ಟಮೊದಲನೆಯ ಬಾರಿ ಕಂಡ ರೋಗಿಗಳ ಮನೆಯ ವಾತಾವರಣವನ್ನು ಪರೀಕ್ಷಿಸಬೇಕು (ಕಲರೋ. ೪). [ ←ಇಂ. Diphtheria ]

**ಡಿಮ** (ನಾ). [ಕಾವ್ಯಮೀ] ಹತ್ತು ವಿಧವಾದ ರೂಪಕಗಳಲ್ಲೊಂದು : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ – ಎಂದು ರೂಪಕಗಳು ಹತ್ತುವಿಧ (ಸಂನಾಟ. ೨೯) : ಡಿಮ – ಇದರ ವಸ್ತು ಪ್ರಖ್ಯಾತ : ಮಾಯ, ಇಂದ್ರಜಾಲ, ಗ್ರಹಣ, ಯುದ್ಧಾದಿಗಳಿಂದ ತುಂಬಿರುತ್ತದೆ. (ಭಾರಮ. ೫೬೨). [ ಸಂ. ]

**ಡಿಮುಕಿ** 'ಡುಮುಕಿ$_1$' ನೋ.

**ಡಿಯ್ಯನಹಕ್ಕಿ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಕೋಯಷ್ಟಿಕಃ, ಟಿಟ್ಟಿಭಕಃ – ಈ ೨ ಡಿಯ್ಯನಹಕ್ಕಿ" (ನಾಚಿರಾ. ೦೧೫).
[ ? + ಹಕ್ಕಿ$_1$ (<ಪಕ್ಕಿ$_1$) ]

**ಡಿಲ್ಲ** 'ಢಿಳ್ಳ' ನೋ.

**ಡಿಲ್ಲಿ** (ನಾ). ದಿಬ್ಬ : ಹತ್ತಿನೋಡ್ಯಾಳೇ ಡಿಲ್ಲೀಯಾ (ಹುಟ್ಟಿಹ. ೫೭). [ ? ]

**ಡಿವಿಡಿವಿ** (ನಾ). ೧. ಒಂದು ಬಗೆಯ ಮರ ; ಸುವಾಸನೆಯ ಹೂವನ್ನು ಬಿಡುವ ಒಂದು ವೃಕ್ಷ : (ಸ). ೨. ಒಂದು ಬಗೆಯ ಸಸ್ಯ : ಸೀಮೆ ಅಲ್ಲೆಕಾಯಿ, ಡಿವಿಡಿವಿ (ಮೃಜಿಗಿ. ೦೫–೨೬೮). [ ? ]

**ಡಿಳ್ಳ** 'ಢಿಳ್ಳ' ನೋ.

**ಡಿಳ್ಳಯಿಸು** 'ಡಿಳ್ಳಿಸು' ನೋ.

**ಡಿಳ್ಳವಾಜು** (ಕ್ರಿ). ತಳಮಳದಿಂದ (ಎದೆ)ಹಾರು,–ಡವಡವ ಬಡಿದುಕೊಳ್ಳು ; ಎದೆಗುಂದು : ಕಟಿಗಂದಿದಾನನಂ ರಸಮಟಿತಧರಂ ಡಿಳ್ಳ [ಪಾಠಾಂ. ಳ]ವಾಜಿದೆದೆ ಬಿಸುಟಂದಂ ಪೊಱಪಾಯ್ವ ಸುಯ್ಗಳ್ (ವ್ಯಪವಿ. ೨೯–೨೬). [ ಡಿಳ್ಳ (<ಢಿಳ್ಳ) + ಪಾಱು$_1$ ]

**ಡಿಳ್ಳವೋಗು, ಡಿಳ್ಳುಹೋಗು** (ಕ್ರಿ). ಗಾಬರಿಗೊಳ್ಳು ; ಬೆದರು ; ಗಾಸಿಪಡು ; ಹೆದರಿಕೆಯಿಂದ ಎದೆ ಡವಡವನೆ ಬಡಿದುಕೊಳ್ಳು : ತಲ್ಲಣಿಸಿ ಹೋಗುತ ಬರುತ್ತದೆ ಡಿಳ್ಳವೋ[ಪಾಠಾಂ. ವಾ]ಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರೊಳಗೆ ತೊಡಕಿ (ಬಸವು. ೫೪–೪೦) ; ತಳ್ವಸಾಱಿಸಿ ರಾಮನ ತಂದುಕೊಡುವೆನು ಡಿಳ್ಳವೋ[ಪಾಠಾಂ. ಡಿಳ್ಳಿಯೋ]ಗದಿರೆಪೆಯೊಳಗೆ (ಕುಶಾಸಾಂ.೨೫–೩೩). **ಡಿಳ್ಳುಹೋಗು:** ಅಳ್ಳೆದೆಯವಳು ರೂಪಾಣೆಯೊಬ್ಬಳು ಲಜ್ಜೆಯಿಲ್ಲದೆ ನಿನಗೆ ಎರಗಿದಳೆಂದರೆ ಈ ಪದ್ಮಿನಿ ಡಿಳ್ಳುಹೋಗುವಳೇ (ಮೂಮಲ್ಲ. ೦೦೭). [ ಡಿಳ್ಳ (<ಢಿಳ್ಳ) + ಪೋಗು$_1$ ]

**ಡಿಳ್ಳಸ** (ನಾ). ದುರ್ಬಲತೆ ; ದೀನತೆ : ಕಳವಳವೊಳಗೆ ಹೊಱಗೆ ನವಾಯಿ ಡಿಳ್ಳಸವೊಳಗೆ ಹೊಱಗೆ ಸಘಾಡಮದ . . . ಮಹೀಶ ಹದನಿದು ನಿನ್ನ ನಂದನನ (ಕುವ್ಯಾ.ಶ. ೨–೧). 'ಡೊಳ್ಳಾಸ' ಪರಾ. [ <ಢಿಳ್ಳ ]

**ಡಿಳ್ಳಾಯಿ$_1$, ಢಿಳ್ಳಾಯಿ** (ನಾ). [ನಾಟ್ಯ] ಒಂದು ಬಗೆಯ ನೃತ್ಯ : ತಾಳವಟ್ಟನಂ ನುಡಿವ ಮೆಲ್ಲಡಿಗಳೊಡನೊಡನೆ ಡಿಳ್ಳಾಯಿದಿಂ ಡೆಂಡಣಿಸತೊಡಗಿತು (ಸೌಂದಪು. ೮–೧೫) ; ಡಿಳ್ಳಾಯಿದುರುಕಾಲರವೆಯ[ರವದ] ಚೆಲ್ವಡರೆ (ರೇವಣ. ೩೨–೪೯). **ಢಿಳ್ಳಾಯಿ:** ಝಂಕೆ ತಾಳ ಢಿಳ್ಳಾಯಿ[ಪಾಠಾಂ. ಡಿಳ್ಳಾಯಿ]ಚಂಡಣೆ . . . ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೭–೬೭ ವ). [ <ಸಂ. ಡಿಲ್ಲಾಯಿ ]

**ಡಿಳ್ಳಾಯಿ₂** (ನಾ). ಮೋಸಗಾರಿಕೆ ; ವಂಚಕತನ ; ಠಕ್ಕು : ನುಸುಳು ನೆಲೆ ಡಿಳ್ಳಾಯಿ [ಪಾಠಾಂ. ಡಿಳ್ಳಾಯ್ತು, ಡಿಳ್ಳಾಸ]ವೈಸರ ಬೆಸುಗೆ ಬಿಗುಹುಳು ಕೊತ್ತು ಕಲೆಗಳ ರಸದ ಪಸರವನಱಿಯಬಾರದು ವಿಗಡ ವಿಟರುಗಳ (ಶಬ್ದಾ.ಅ. ೦೫-೨೫). [ ? ]

**ಡಿಳ್ಳಾಯಿ** (ನಾ). = ಡಿಳ್ಳಾಯಿ₁ : ನುಣ್ಪೋಳ ಡಿಳ್ಳಾಯಿಯಿಂ ಮೃದು ಹಸ್ತಾಯತದಿಂ . . . ಸಲೆ ರಾಗಮಂಜರಿ ಕರಂ ಮೇಳೈಸಿದಳ್ ಲಾಸ್ಯಮಂ (ದಶಕು. ೮-೧೬೪) ; ಪಯವಾಡು ನಿಜ್ಜವಣೆ ಚಾಳಿಯ ಮುಲ್ಲಾಸಂ ತಿರುಂಪು ತಡವಿತ್ರಡ ಮುನ್ನಯನವಿಶೇಷಂ ಡಿಳ್ಳಾ[ಪಾಠಾಂ. ಲ್ಲಾ]ಯಿಯ ಲುಳಿವುರಿ ದುಸುರಮೆಸವಿನಂ ನರ್ತಿಸಿದಳ್ (ಧರ್ಮಪ ೨-೨೬).

[ ಸಂ. ಡಿಲ್ಲಾಯಿ ]

**ಡಿಳ್ಳಿತ** (ನಾ). ಭಯಂಗೊಳಿಸಿದುದು ; ಬೆದರಿಸಿದುದಂ ; ಕುಗ್ಗಿಸಿದುದು: ಡಮರುಗಧ್ವತ ಡಾಮರನರ್ದೆಡಿಳ್ಳಿತ ಶ್ರೈವಮಲಡೀಂಕಾಂಧಕ (ಪ್ರಭುಪು. ೫-೦೬೪). [ <ಢಿಳ್ಳ ? ]

**ಡಿಳ್ಳಿಸು, ಡಿಳ್ಳಯಿಸು, ಡಿಳ್ಳೈಸು, ದಿಳ್ಳಿಸು** (ಕ್ರಿ). ೧. ನಡುಗು; ಕಂಪಿಸು; ಹೆದರು; ಭಯಪಡು: ನುಣ್ಗೂರಳಂ ಕಂಡು ವಿಳಾಸದಿಂದೆ ಸರಿಯಾಯ್ತು ಲ್ಲೆಂಬ ಲಜ್ಜಾಭರಾತುರದಿಂದಂದೊಳಗೆಯ್ದಿ ಡಿಳ್ಳಿಸಿ ಜಲಂ ಪೊಕ್ಕಿರ್ದುದು . . . ಆ ಕಂಬು (ಚಾಧಪು. ೯-೭೦) ; ಡಿಳ್ಳಿಸಿದವಂ ಸ್ಖಲಿತನಾ ಪ್ರಸ್ಕಂದನಕ್ಕು (ಮಂಗರಾ-೪೯-೩೯); ಕಳ್ಳನೊಳಗು ಡಿಳ್ಳಿಸಿ ಸರಿಯಲಾವ ಕಡೆಯೊಳು ಪೋಪು ಪಾಯವಟ್ಟೆಗಳಱಿಯದೆ (ಸಿಂಗಿರಾ. ೧೧-೧೨) ; ಜಲ್ಲಿದುಂಬಿಗಳ ಝಂಕಾರಕ್ಕೆ ಮುನಿಜನ ಡಿಳ್ಳಿಸಿತೇನ ಹೇಳುವೆನು (ಮೋಹತ. ೭-೧೧) ; ಹುಸಿಯಲ್ಲ ನನ್ನನಾಗಿನಿಸಪ್ಪುವಾಗ ಡಿಳ್ಳಿಸಿತೆದೆ ಜುಮ್ಮನೊಸರಿಸಿ (ಭರತ. ೯-೧೧೧). ೨. ಭಯದಿಂದ ನಡುಗಿಸು ; ಗಾಬರಿಗೊಳಿಸು ; ಎದೆಗುಂದಿಸು ; ಗಾಸಿ ಪಡಿಸು : ದಿಗಿಲು ಡಿಳ್ಳಿಸಿಯೆನ್ನ ಚಿಕ್ಕದೇವನೃಪನ ಬಗೆಯಲಿ ತಾಳ್ದ ಶ್ರೀರಂಗ ಬಲ್ಲಹನನಗಲದೆ ನೆರೆದಿರೆಂದವುದೀ ಹದನ (ಮಡಿಳ್ಳಾ. VI, ೧೬೫ ಶೃಂಗಾರ ಸೂಕ್ತ್ಯುದಾಹರಣ). ೩. ದುರ್ಬಲಗೊಳಿಸು;ಶಕ್ತಿಹೀನವಾಗಿಸು; ಕುಗ್ಗಿಸು. **ಡಿಳ್ಳಯಿಸು** : ೧. ರಾಜೇಂದ್ರ ಶಿಖಾಮಣಿ ತನ್ನಯ ಭೂರಿ ಬಳಂದೆರಸು . . . ಧಾರಿಣಿ ಡಿಳ್ಳಯಿಸುವವೊಲ್ ಬಡಗಣ ದಾರಿವಿಡಿದು ನಡೆತಂದು (ಜಯನೃಪ. ೯-೬). **ಡಿಳ್ಳೈಸು** : ೧. ಅವಯವಂಬಡದೆನೆಂದತಿ ನಯಂಗುಂದಿ ಕಂದಿತ್ತಲೆರ್ದ ಡಿಳ್ಳೈಸಿ ಗುರುಪದೋಚಿತ ಸಲಿಲಮಂ ಅತಿಶಯದೊಳಾಂತು (ಕೂಟ್ಟೂಬ. ೦೫-೬೨). **ದಿಳ್ಳಿಸು** : ೧. ಮೇಲಣ ಲೋಕ ದಿಳ್ಳಿಸುತಿಹುದಾ ಮಹಾವ್ಯಾಳ ತುಡುಕೆ ಬಿಲ್ಲ ಕೋಲ (ನಾಗಕು. ೧೧-೬). [ ಡಿಳ್ಳ (<ಢಿಳ್ಳ) + – ಇಸು₂ ]

**ಡಿಳ್ಳು** 'ಢಿಳ್ಳ' ನೋ.

**ಡಿಳ್ಳುಹೋಗು** 'ಡಿಳ್ಳವೋಗು' ನೋ.

**ಡಿಳ್ಳೈಸು** 'ಡಿಳ್ಳಿಸು' ನೋ.

**ಡೀ** (ನಾ). ಒಂದು ಅನುಕರಣ ಶಬ್ದ ; ಡಿಕ್ಕಿ. 'ಡೀಕೊಡು' ಪರಾ.

**ಡೀಕಾಡು** (ನಾ). ಸೇಡನ್ನಿಟ್ಟುಕೊಳ್ಳುವುದಂ ; ಜಿದ್ದು ; ಮಾತ್ಸರ್ಯ; "ಜಿದ್ದಾಟ" (ಜಾನಕೋ. ೬೩). [ ಡೀಕು₁ + ಆಡು₂ ]

**ಡೀಕು** 'ದೇಕು₁' ನೋ.

**ಡೀಕೊಡು** (ಕ್ರಿ).=ಡಿಕ್ಕಿಕೊಡು ೧ : ತಗರುಗಳು ಮಹಾರಭಸದಿಂದ ತಲೆ ತಲೆಗೆ ಡೀಕೊಟ್ಟು ಕಾದಿದುವು (ಭಾರವೀ. ೦೦೮). [ ಡೀ + ಕೊಡು₁ ]

**ಡೀಕೊಳ್ಳು** (ಕ್ರಿ). ಡಿಕ್ಕಿಹೊಡೆಸಿಕೊಳ್ಳು ; ತಿವಿಸಿಕೊಳ್ಳು: (ಶ).

[ ಡೀ + ಕೊಳ್ಳು₁ (<ಕೊಳ್₁) ]

**ಡೀಗು** 'ಢೀಗು' ನೋ.

**ಡೀನ** (ಗು). ೧. ಆಕಾಶದಲ್ಲಿ ಹಾರಾಡಿದ,–ಸಂಚರಿಸಿದ. (ನಾ). ೨. ಹಾರುವಿಕೆ ; ಹಾರಾಟ. [ ಸಂ. ]

**ಡೀಲ** 'ಢಿಳ್ಳ' ನೋ.

**ಡೀಲಿ** 'ಡೇಲಿಯಾ' ನೋ.

**ಡೀಲು** 'ಢಿಳ್ಳ' ನೋ.

**ಡೀಹೊಡೆ** (ಕ್ರಿ).=ಡಿಕ್ಕಿಕೊಡು : (ಶ).

[ ಡೀ + ಹೊಡೆ₁ (<ಪೊಡೆ₁) ]

**ಡುಂಡುಕ** (ನಾ). ೧. ಎರಡು ತಲೆಯ ಹಾವು ; ಡುಂಡುಭ. ೨. ವಿಷ ವಿಲ್ಲದ ನೀರುಹಾವು; ಒಳ್ಳೆ: ಭಾನುತೇಜವ ರಾಹು ಕೊಂಡಲ್ಲಿ ಸೋನೆಯ ಡುಂಡುಕ ತನ್ನಯ ಕೇಣವನೆತ್ತಿದಂತೆ (ಸುಂಕಬಂ. ೫೪). ೩. "ಹೆಮ್ಮರ ; ತಿಗಡುಮರ" (ಅಮರ. ೮೪೫). ೪. ದುರ್ಗಸಿಂಹನ ಪಂಚತಂತ್ರದಲ್ಲಿ ಬರುವ ಒಂದಂ ತಿಗಣೆಯ ಹೆಸರು : ಡುಂಡುಕನೆಂಬ ತಿಗುಣೆ ಮಾಡಿದ ದೋಷದಿಂ ಮಂದವಿಸರ್ಪಿಣಿಯೆಂಬ ವಸ್ತ್ರಮ್ಯಗಂ ಕೆಟ್ಟುದು (ಪಂಚತಂ. ೦೨೨-೦೬). [ ಸಂ. ]

**ಡುಂಡುಕೆ** (ನಾ). = ಡುಂಡುಕ : "ಡುಂಡುಭಃ – ಡುಂಡುಕೆ" (ಓಷಧಿ. ೬೪).

[ ಸಂ. ಡುಂಡುಕ ]

**ಡುಂಡುಚಿ** (ನಾ). ಒಂದು ಬಗೆಯ ಚರ್ಮವಾದ್ಯ ; ಗೊರವರಂ ಬಾರಿಸುವ ವಾದ್ಯ; ಡಮರು: ಪಂಡಿತರುಂ ವಿವಿಧ ಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರೆ ಕೇಳ್ವೊಡೆ ಗೊರವರ ಡುಂಡುಚಿ[ಪಾಠಾಂ. ಡುಂಡುಂಚಿ]ಯೇ ಬೀದಿವಱಿಯ ಬೀರನ ಕತೆಯೇ (ಧರ್ಮನಾ. ೦-೫೬) ; 'ಗೊರವರ ಡುಂಡುಚಿ' ಯು ಪುರಾತನ ಕಾಲದಿಂದ ಹೆಸರಾಗಿದೆ (ಕರ್ನಾಪೂ. ೨೬).

[ ? ]

**ಡುಂಡುಬ** (ನಾ). ಒಂದು ಬಗೆಯ ನೀರು ಹಾವು ; ಒಳ್ಳೆ : "ಡುಂಡುಬ – ವಳ್ಳೆಹಾವು" (ಅಕಾನಿ. ೧೧-೧೧). 'ಡುಂಡುಕ' ಪರಾ.

[ <ಸಂ. ಡುಂಡುಭ ]

**ಡುಂಡುಭ** (ನಾ). ೧. ಎರಡು ತಲೆಯ ಹಾವು ; ಇರ್ತಲೆಗುಯ್ಯ ; ಉರಿ ಶಿಂಗಿ : "ರಾಜಿಲಃ, ಡುಂ[ಪಾಠಾಂ. ದುಂ]ಡುಭಃ–೨ ಎರಡು ತಲೆಗಳುಳ್ಳ ಶಿಖಂಡಿಯೆಂಬ ಸರ್ಪಭೇದದ ಹೆಸರುಗಳು. ಎರಡುತಲೆ ಉರಿಶಿಂಗಿ" (ಸಿದ್ಧಾಂತಿ. ೬೫). ೨. ನೀರುಹಾವು ; ಒಳ್ಳೆ: "ರಾಜಿಳಃ, ಡುಂಡುಭಃ – ಈ ೨ ಒಳ್ಳೆ" (ಹಲಾಯು. ೦೦೬-೨೧) ; ಒಂದು ಕೃಷ್ಣತರುಣೋರಗಂ ಬಂದು ಕೊರ್ಬಿಯಾಡುವ ಡುಂಡುಭಂಗಳಂ ಕಂಡು (ಪಂಚತಂ. ೦೨೩-೨೦). 'ದುಂಡುಭ' ಪರಾ. [ ಸಂ. ]

**ಡುಗಡುಗಿ, ಡುಗುಡುಗಿ** (ನಾ). (ಉಕ) ಆತಂಕ ; ಹೆದರಿಕೆ ; ಭೀತಿ : ನನ್ನ ಮ್ಯಾಗ ಯಾವ ಏನು ಹೇಳತಾನೋ ಸರಕಾರಕ್ಕ ಅಂತ ಮೊದಲು ಡುಗಡುಗಿ ಇರ್ತಿತ್ತು (ಪ್ರೇಮೂರ್ತಿ. ೨೬೬). **ಡುಗುಡುಗಿ** : ನೀ ಕಬೂಲಾಗತ್ಯೋ ಇಲ್ಲೋ ಅಂತ ನನಗ ಡುಗುಡುಗಿ ಇತ್ತು (ದೀಪಹ. II, ೧೪).

[ ←ಮರಾ. ಡುಗಡುಗೀ, ಡುಗಡುಗ ]

**ಡುಗುಡುಗಿ** 'ಡುಗಡುಗಿ' ನೋ.

**ಡುಣ್ಣ** (ನಾ). ಒಂದು ಬಗೆಯ ನೆಲ್ಲು,–ಬತ್ತ : ಕೊಡಗು ಮಾಳಲಕಂತೆ ಹರಹಿನ ಡುಣ್ಣಗಳೊಡನೊಪ್ಪುತಿಹ ಭೈರಾವಳಿಯ ಕಡು ಸೊಬಗಾಂತಿಹ ಚಂದ್ರೋದಯ ಶಾಲಿಯೆಡೆವಿಡದೆಸೆದುಪರ್ತಿಯಲಿ (ಕಂನವಿ. ೫-೭೦).

[ ? ]

**ಡುಬರಿ** (ನಾ). ೧. ಮೇಲಕ್ಕೆ ದುಂಡಾಗಿ ಉಬ್ಬಿರುವ ಸ್ಥಿತಿ: (ಶ). ೨. ಒಂಟೆಯ ಬೆನ್ನಿನಲ್ಲಿರುವ ಉಬ್ಬು,–ಮೇಲಕ್ಕೆ ಎದ್ದಿರುವ ದುಂಡಗಿರುವ ಭಾಗ : ಅರಬೀ ದೇಶದ ಒಂಟೆಗಳ ಬೆನ್ನಮೇಲೆ ಒಂದೇ ಡುಬರಿ ಇರುವುದು (ಮುಂಬಯಿ. ೩-೬೪). 'ದಂಮ್ಮು₁' ಪರಾ.

[ ←ಮರಾ. ಡುಬರ, ಡುಬರಾ ]

**ಡುಬಲಿ** (ಗು). ಬೊಜ್ಜು ಬೆಳೆದ ; ದಪ್ಪನಾದ ಶರೀರವುಳ್ಳ ; ಸ್ಥೂಲ ದೇಹವುಳ್ಳ : ಸುಟ್ಟ ಮೋರೆಯ ಜನರು ನನಗೆ ಡುಬಲಿ ಅಜ್ಜ ಎಂದು ಕರೆಯುತ್ತಾರೆ (ಜಮಿನ್ಯಾ. ೩೦).

[ ←ಮರಾ. ಢಬುಲಾ ]

**ಡುಬಾಯಿಸು** (ಕ್ರಿ). ೧. ನೀರಿನಲ್ಲಿ ಮುಳುಗಿಸು. ೨. ನೀರಿನಲ್ಲಿ ಮುಳುಗಿಸು. ೩. ಹಾಳುಮಾಡು ; ನಾಶಮಾಡು : (೬).

[ ಡುಬಾ₀ (ℙ ←ಹಿಂ. ಡುಬಾನಾ) + – ಇಸು₃ ]

**ಡುಬುಕಿ**, ಡುಮಕಿ, ಡುಮುಕಿ₂ (ನಾ). ೧. ಮುಳುಗುವಿಕೆ. ೨. (ಆಲಂ) ಸೋಲು ; ತೇರ್ಗಡೆಯಾಗದಿರುವುದು ; ಅಪಜಯ. **ಡುಮಕಿ :** ೨. ಈ ಪಂದ್ಯದಲ್ಲಿಯೂ ಶಾಲೆಗೆ ಡುಮಕಿ (ರೂಢಿ). **ಡುಮುಕಿ₂ :** ೨. ಪರೀಕ್ಷೆಯಲ್ಲಿ ಈ ಸಲವೂ ಡುಮುಕಿಯೇ (ರೂಢಿ).

**ಡುಬುಕಿಹೊಡೆ** = (ಪರೀಕ್ಷೆ ಮುಂತಾದುವುಗಳಲ್ಲಿ) ತೇರ್ಗಡೆಯಾಗದಿರು ; ಸೋಲು ; ಫೇಲಾಗು : ರಾಮುವಿಗೆ ತೇರ್ಗಡೆಯಾಯಿತು, ವೆಂಕಟೇಶ ಡುಬುಕಿಹೊಡೆದ (ಸಂಧ್ಯಾರಾ. ೫೩).

[ ←ಹಿಂ. ಮರಾ. ಡುಬಕೀ ]

**ಡುಬ್ಬ** 'ದುಮ್ಮು₁' ನೋ.

**ಡುಬ್ಬಕೆತ್ತು** (ಕ್ರಿ). ೧. ಬೆನ್ನಮೇಲಿನ ಚರ್ಮವನ್ನು ಸುಲಿ. ೨. (ಆಲಂ) ಸ್ವಲ್ಪವೂ ಬಿಡುವು ಕೊಡದೆ ದಂಡಿಸಿಕೊಳ್ಳು ; ಬೊಜ್ಜನ್ನಿಳಿಸು : ಬಡ್ಡಿಯೊಳಗೆ ಡುಬ್ಬಾ ಕೆತ್ತುವ ಸಾವಕಾರ ನೀನಿರಬಹುದು (ಮನಜಿ. ೫).

[ ಡುಬ್ಬ (<ದುಮ್ಮು₁) + ಕೆತ್ತು₃ ]

**ಡುಬ್ಬು** 'ದುಮ್ಮು₁' ನೋ.

**ಡುಬ್ಬುಕ** 'ದಬ್ಬುಕ' ನೋ.

**ಡುಮಕಿ** 'ಡುಬುಕಿ' ನೋ.

**ಡುಮುಕಿ₁**, ಡಿಮಕಿ (ನಾ). ಒಂದು ಬಗೆಯ ಚರ್ಮವಾದ್ಯ : ಎಲ್ಲಿಯೋ ಒಬ್ಬ ಹಳ್ಳಿಯ ಹುಡುಗನು ಡುಮುಕಿ ಬಾರಿಸುತ್ತ ಹಾಡುತ್ತಾನೆ(ಅಕ್ಕತಂ. ೭). 'ಟುಮುಕಿ' ಪರಾ. **ಡಿಮಕಿ :** ಬುಡಬುಡಿಕೆ, ಡಿಕ್ಕಿ, ಡಿಮಕಿ, ಝಾಲ್ರಿ, ಮದ್ದಳೆ, ಗೋಮುಖಾದಿ ವಾದ್ಯಗಳೂ ಉಂಟು (ಸಿದ್ಧಾಂತಿ. ೫೫).

[ ←ಮರಾ. ಢುಮಕೀ ]

**ಡುಮುಕಿ₂** 'ಡುಬುಕಿ' ನೋ.

**ಡುಮುಕು** (ನಾ). ದಪ್ಪ ; ಡೊಳ್ಳು : ಡುಮುಕಾದ ಗಿಡ್ಡದೇಹ ; ತೆಂಗಿನ ಕಾಯಿಗೆ ಎರಡೂ ಮಗ್ಗುಲು ಮೀಸೆ ಹೊರಟಿದ್ದರೆ ಹೇಗೆ ಕಾಣಬಹುದೋ ಅಂತಹ ಮೋರೆ (ಆರಿಹಿಂ. ೬೨). 'ಟುಮುಕು' ಪರಾ.

[ ←ಮರಾ. ಢುಮಕೀ ]

**ಡುಮ್ಮ** (ನಾ). ಹೊಟ್ಟೆ ಉಬ್ಬಿದವ. 'ಡುಮ್ಮಣ್ಣ' ಪರಾ.

[ಡುಮ್ಮು (<ದುಮ್ಮು₁) + – ಅ₇ ]

**ಡುಮ್ಮಣ್ಣ** (ನಾ). ಹೊಟ್ಟೆ ದಪ್ಪಾಗಿರುವವನು : ಕೈಕಾಲು ಸಣ್ಣ ಹೊಟ್ಟೆ ಡುಮ್ಮಣ್ಣ (ಗಾದೆ). [ ಡುಮ್ಮ + ಅಣ್ಣ₁ ]

**ಡುಮ್ಮಣ್ಣಿ** (ನಾ). ದಪ್ಪನಾಗಿರುವ ಹುಡುಗಿ ; "ಲಕ್ಷ್ಮವ್ವಂಥ ಹುಡಿಗಿ" (ರಾಮಾಯಣಂ. ೨೬೬). [ ಡುಮ್ಮಣ್ಣ + – ಇ₂ ]

**ಡುಮ್ಮಿ** 'ದುಮ್ಮು₁' ನೋ.

**ಡುಮ್ಮು** 'ದುಮ್ಮು₁' ನೋ.

**ಡುರಕಿ** 'ಡಂಜುಂಕು' ನೋ.

**ಡುರಕಿಹಾಕು** 'ಡುರುಕುಂಹಾಕು' ನೋ.

**ಡುರಕಿಹೊಡೆ** (ಕ್ರಿ) = ಡುರುಕುಂಹಾಕು : (೬).

[ ಡುರಕಿ (<ಡುಜುಕು) + ಹೊಡೆ₁ (<ಪೊಡೆ₁) ]

**ಡುರಿಕೆ** 'ಡಂಜುಂಕಂ' ನೋ,

**ಡುರುಕಿಡು**, ಡುರ್ಕಿಡು (ಕ್ರಿ). = ಡುರುಕುಂಹಾಕು : ಉಭಯಕರ್ಣಂಗಳಂ ನಿಮಿರ್ಚಿ ನೆಲನ ವಡನೆ ಘ್ರಾಣಿಸುತ ಡುರುಕಿಡಲಜಾಂಡದ ಘಟಂ ನಡುಗಿತ್ತು (ನವಮೋ. ೬-೪೫). **ಡುರ್ಕಿಡು :** ಇರ್ಕಿಲದ ದಾನವರನಿಱಿವುತುಂ ಮುಱಿವುತುಂ ಡುರ್ಕಿಡುತ್ತಸುರರಂ ಕೆಡವುತುಂ . . . ವೃಷಭಂ ಪ್ರಹಾರಿಸಿದನು (ಹರಿವು. ೪೪-೦೮). [ ಡುರುಕು (<ಡುಜುಕು) + ಇಡು₁ ]

**ಡುರುಕು** 'ಡಂಜುಕು' ನೋ.

**ಡುರುಕುಹಾಕು**, ಡರಿಕೆಹಾಕಂ, ಡಂರಂಕಿಹಾಕು, ಡುರುಕೆಹಾಕು (ಕ್ರಿ). (ಎಮ್ಮೆ, ಗೂಳಿ, ಹಂದಿ, ಗೊಂಕರುಕಪ್ಪೆ ಮೊದಲಾದ ಪ್ರಾಣಿಗಳು) ಕರ್ಕಶ ಧ್ವನಿಮಾಡು ; ಗುಂಟುರುಹಾಕಂ : ಹಂದಿ ಡುರುಕುಹಾಕಿದ ಶಬ್ದ ಕೇಳಿಸಿತು (ನಡಿದಾ. II, ೦೦೩೯). **ಡರಿಕೆಹಾಕು :** ಕಪ್ಪೆಗಳು ಎತ್ತುಗಳಿಗಿಂತ ಎತ್ತರವಾಗಿ ಡರಿಕೆಹಾಕಬಹುದು (ಪ್ರವಾತೋ. ೬೩). **ಡುರಕಿಹಾಕು :** ಎಮ್ಮೆಯೊಂದು ಮೈಯಲ್ಲಿ ತುಂಬಿದ್ದ ಸೊಳ್ಳೆಗಳೊಂದಿಗೆ, ಡುರಕಿಹಾಕುತ್ತ ಒಳಗೆ ನುಗ್ಗಿಬಿಟ್ಟಿತು (ಮರಣಾ. ೨೭) ; ಎತ್ತುಗಳು ಡುರಕಿಹಾಕುತ್ತವೆ (ಮುಂಬಯಿ. ೩-೦೮). **ಡುರುಕೆಹಾಕು :** ಎರಡು ಗೂಳಿಗಳು ಸೊಕ್ಕಿಗೆ ಬಂದು ಎರಡನೇ ದನಗಳನ್ನು ಇರಿಯುತ್ತ ಡುರುಕೇಹಾಕುತ್ತ (ಮುಂಬಯಿ. ೫-೯೦). [ ಡುರುಕು (<ಡುಜುಕು) + ಹಾಕು (<ಪಾಯ್ಕು₁) ]

**ಡುರುಕೆ** 'ಡಂಜುಕು' ನೋ.

**ಡುರುಕೆಹಾಕು** 'ಡುರುಕುಂಹಾಕು' ನೋ.

**ಡುರ್ಕಿಡು** 'ಡರುಂಕಿಡಂ' ನೋ.

**ಡುರ್ಕು** 'ಡುಜುಕು' ನೋ.

**ಡುಲಿ**, ಡುಳಿ (ನಾ). ಹೆಣ್ಣಾಮೆ : "ಡುಲಿ[ಪಾಠಾಂ. ಢುಳಿ]ಯೆನಲು ಹೆಣ್ಣಾಮೆಯಕ್ಕುಂ" (ಮಂಗರಾ. ೦೨೦-೮). **ಡುಳಿ :** 'ಡುಳಿರಾಜ' ಪರಾ.

[ ಸಂ. ]

**ಡುಳಿ** 'ಡುಲಿ' ನೋ.

**ಡುಳಿರಾಜ** (ನಾ). ೧. ಆಮೆಗಳ ಒಡೆಯಂ ; ಕೂರ್ಮಪತಿ ; ದೊಡ್ಡ ಆಮೆ. ೨. ವಿಷ್ಣುವಿನ ಅವತಾರಗಳಲ್ಲೊಂದಾದ ಮಹಾಕೂರ್ಮ ; ಕಮಠ : ಡುಳಿರಾಜನಿಲ್ಲದೆಡೆ ಧರಣಿ ನಿಲ್ಲುವದುಂಟೆ ನಳಿನಾಪ್ತನಿಲ್ಲದಡೆ ನಡೆವುದೇ ಜಗವು (ದೇವೀಚ. ೩೬). [ ಡುಳಿ ( = ಡುಲಿ) + ರಾಜ ]

**ಡುಳ್ಳಿ** (ನಾ). ವಂಚನೆ ; ಸುಳ್ಳು : ತಲ್ಲಣಿಸಿ ನಿಲಲಾರದಾ ಖಳಂ ಕೈಯೊಡನೆ ಡುಳ್ಳಿಯಿಂದಾ ಮುನಿಪನುರುಶಿರೋಲಕ್ಷ್ಮಿಯಂ ಕೊಳ್ಳೆಗೊಂಡೆಡಹುತಂ (ಶರಚ. ೩೫-೨೫); ಡುಳ್ಳಿಯೋ ಸತ್ಯಮೋ ಎಂಬೆನೆ (ಹಾ.ದಾಸ್ಯ. ೩-೦೦-೦೩).

[ ? ]

**ಡುಳ್ಳಿಮನ** (ನಾ). ಸುಳ್ಳುಮನಸ್ಸು ; ಕ್ಷುದ್ರಮನ (?) : ಕಳ್ಳಕನ್ನಡಿ ಸಾಯಿ, ಡೊಳ್ಳು ಕೋಮಟಿಗನಾ ಹುಳ್ಳಿ ನಯುಶೂಲಯೇರಿಮಯುಂಬಗಾದೆ ಡುಳ್ಳಿಮನವು ಯಿದು ಪಾಪವ ಮಾಡ್ದರೆ ಸುಳ್ಳಿಗೆ ಆತ್ಮಗೆಯೆಂದು ವೂಹಿಸುವರು (ಚಿದಾನ. ೦೦-೮). [ ಡುಳ್ಳಿ + ಮನ ]

**ಡುಜುಕೆ** 'ಡುಜುಕು' ನೋ.

**ಡುಜುಕಾರವ** (ನಾ). ಡುರುಕಿನ ಗಟ್ಟಿಯಾದ ಶಬ್ದ ; ಗುಟುರು : ತೋರ ಹೋರಿಗಳ ಡುಜುಕಾರವಂ ಗಳದ ಘಂಟಾರವಂ ಪಶುಗಳಂಬಾರವಂ (ಹರಿವು. ೦೦-೦೭). [ ಡುಜುಕು + ಆರವ ]

**ಡುಜುಕು**, ಡರಕೆ, ಡರಿಕೆ, ಡುರಕಿ, ಡಂರಿಕೆ, ಡುರುಂಕು, ಡುರುಂಕೆ ಡುರ್ಕು, ಡಂಜುಕೆ (ನಾ). ೧. (ಎಮ್ಮೆ, ಗೂಳಿ, ಹಂದಿ, ಗೊಂಕರಂ ಕಪ್ಪೆ ಮೊದಲಾದ ಪ್ರಾಣಿಗಳು ಮಾಡುವ) ಒಂದು ಬಗೆಯ ಕರ್ಕಶ ಶಬ್ದ ; ಗುಟುರು. 'ಡಂಜುಕನ್' ಪರಾ. **ಡರಕೆ :** ೧. ಗೂಳಿಯ ಡರಕೆ (ಗುಟರು) ಇವು ಶಬ್ದಾನುಕೃತಿಯೇ (ಕರ್ನಾಟ. ೩೩೯). **ಡರಿಕೆ :** ೧. 'ಡರಿಕೆ ಹಾಕು' ಪರಾ. **ಡುರಕಿ :** 'ಡಂರಕಿಹಾಕು' ಪರಾ. **ಡುರಿಕೆ :** ೧.

